# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ ನವೆಂಬರ್ ೧೦, ೨೦೧೬ (ಕಾರ್ತಿಕ ೧೯, ಶಕ ವರ್ಷ ೧೯೩೮)<br>Bengaluru, Thursday, November 10, 2016 ( Karthika 19, Shaka Varsha 1938) | ಸಂಚಿಕೆ ೪೪<br>Issue 44 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ, ಮಲ್ಲೇಶ್ವರಂ ಶ್ರೀ ರಾಘವೇಂದ್ರ ಆಂಜನೇಯಸ್ವಾಮಿ ದೇವಾಲಯಕ್ಕೆ ಸೇರಿದ ಕಲ್ಯಾಣ ಮಂಟಪ ಹಾಗೂ ಅಂಗಡಿ ಮಳಿಗೆಗಳ ಗುತ್ತಿಗೆ ನೀಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಕಂಇ 12 ಮುಆಬಿ 2011, ದಿನಾಂಕ: 17–05–2011.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 133 ಮುಆಬಿ 2013, ದಿನಾಂಕ: 27–11–2013.
3. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ: ಎಡಿಎಂ/03/ಎಲ್ಎನ್ಡಿ/92/2013–14, ದಿನಾಂಕ: 17–05–2016.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 17–05–2011ರ ಸರ್ಕಾರದ ಆದೇಶದಲ್ಲಿ, ಬೆಂಗಳೂರು ನಗರ ಸಭಾ ವಲಯ ವ್ಯಾಪ್ತಿಯಲ್ಲಿರುವ ಮುಜರಾಯಿ ದೇವಸ್ಥಾನಗಳಿಗೆ ಸೇರಿದ ಒಟ್ಟು 228 ಅಂಗಡಿ, 22 ನಿವೇಶನ ಮತ್ತು 34 ಮನೆಗಳು ಸೇರಿ ಒಟ್ಟು 284 ಸ್ವತ್ತುಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರಿಗೆ ಪ್ರಸ್ತುತ ಜಾರಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಗುತ್ತಿಗೆ ಆಧಾರದ ಮೇಲೆ ನೀಡಲು ಕೆಲವು ಪರಿಷತ್ತುಗಳಿಗೊಳಪಟ್ಟು ಆದೇಶಿಸಲಾಗಿದೆ. ಅದರಲ್ಲಿ ಬೆಂಗಳೂರು ನಗರ ಜಿಲ್ಲೆ, ಮಲ್ಲೇಶ್ವರಂನಲ್ಲಿರುವ ಶ್ರೀ ರಾಘವೇಂದ್ರ ಆಂಜನೇಯಸ್ವಾಮಿ ದೇವಲಾಯಕ್ಕೆ ಸೇರಿದ ಅಂಗಡಿಗಳ ಪೈಕಿ 2 ಮಳಿಗೆಗಳು ಹಾಗೂ ಒಂದು ಕಲ್ಯಾಣ ಮಂಟಪವನ್ನು ಪರಿಶಿಷ್ಟ ಜಾತಿಯವರಿಗೆ ಮತ್ತು 1 ಮಳಿಗೆಯನ್ನು ಪರಿಶಿಷ್ಟ ಪಂಗಡದವರಿಗೆ ಮೀಸಲಿರಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 27–11–2013ರ ಸರ್ಕಾರದ ಆದೇಶದಲ್ಲಿ ದಿನಾಂಕ: 17–05–2011ರ ಆದೇಶದನ್ವಯ ಪರಿಶಿಷ್ಟ ಜಾತಿಯವರಿಗೆ ಮೀಸಲಿರಿಸಲಾದ ಬೆಂಗಳೂರು ನಗರ, ಮಲ್ಲೇಶ್ವರಂ ಶ್ರೀ ರಾಘವೇಂದ್ರ ಆಂಜನೇಯಸ್ವಾಮಿ ದೇವಾಲಯದ ಪಾಜಕ ಕಲ್ಯಾಣ ಮಂಟಪವನ್ನು ದೇವಾಲಯದಲ್ಲಿ ನಡೆಯುವ ಧಾರ್ಮಿಕ ಸೇವೆಗಳಿಗೆ ಶುಲ್ಕ ವಿಧಿಸಿ, ಉಪಯೋಗಿಸಿಕೊಳ್ಳುವಂತೆ ಆದೇಶಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ  ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ: 17–05–2016ರ ಪತ್ರದಲ್ಲಿ ಸರ್ಕಾರದ ದಿನಾಂಕ: 27–11–2013ರ ಆದೇಶವನ್ನು ಹಿಂಪಡೆದು, ಬೆಂಗಳೂರು ನಗರ, ಮಲ್ಲೇಶ್ವರಂ ಶ್ರೀ ರಾಘವೇಂದ್ರ ಆಂಜನೇಯಸ್ವಾಮಿ ದೇವಾಲಯಕ್ಕೆ ಸೇರಿದ ಪಾಜಕ ಕಲ್ಯಾಣ ಮಂಟಪದ ಹೆಸರನ್ನು **"ಶ್ರೀ ರಾಘವೇಂದ್ರ ಆಂಜನೇಯಸ್ವಾಮಿ ಬೃಹತ್ ವಾಣಿಜ್ಯ ಮಳಿಗೆ"** ಎಂದು ಬದಲಾವಣೆ ಮಾಡಿ ಪರಿಶಿಷ್ಟಜಾತಿಯವರಿಗೆ ಮೀಸಲಾತಿ ಅನ್ವಯಿಸಿ ಸಾರ್ವಜನಿಕ ಇ–ಹರಾಜಿನ ಮೂಲಕ ಗುತ್ತಿಗೆಗೆ ನೀಡಲು ಅಥವಾ ಪ್ರಸ್ತಾಪಿತ ಪಾಜಕ ಕಲ್ಯಾಣ ಮಂಟಪವನ್ನು (147x14=2058 ಚ.ಅ. ವಿಸ್ತೀರ್ಣದ) ಮೀಸಲಾತಿಯಿಂದ ಹೊರತುಪಡಿಸಿ, ದೇವಾಲಯದಲ್ಲಿ ನಡೆಯುವ ಧಾರ್ಮಿಕ ಸೇವೆಗಳಿಗೆ ಶುಲ್ಕ ವಿಧಿಸಿ ಉಪಯೋಗಿಸಿಕೊಳ್ಳಲು ಮುಂದುವರೆಸಲು ನಿರ್ಧರಿಸಿದಲ್ಲಿ ಇದಕ್ಕೆ ಬದಲಾಗಿ ದೇವಾಲಯಕ್ಕೆ ಸೇರಿದ ಈಗಾಗಲೇ ಮೀಸಲಾತಿಯನ್ನು ನಿಗಧಿಪಡಿಸಿರುವ 3 ಅಂಗಡಿಗಳ ಜೊತೆಗೆ (2 ಅಂಗಡಿಗಳು ಪರಿಶಿಷ್ಟ ಜಾತಿ, ಒಂದು ಅಂಗಡಿ ಪರಿಶಿಷ್ಟ ಪಂಗಡದವರಿಗೆ) ಖಾಲಿ ಇರುವ ಉಳಿದ 3 ಅಂಗಡಿಗಳನ್ನು (ಪ್ರತಿ ಅಂಗಡಿಯ ವಿಸ್ತೀರ್ಣ 206.40 ಚ.ಅ. 3 ಅಂಗಡಿಗಳ ಒಟ್ಟು ವಿಸ್ತೀರ್ಣ 619.20 ಚ.ಅ.) ಪರಿಶಿಷ್ಟ ಜಾತಿಯವರಿಗೆ ಮೀಸಲಿರಿಸಿ ಇ–ಹರಾಜು ಮುಖಾಂತರ ನೀಡಲು ಸರ್ಕಾರದಿಂದ ಆದೇಶ ಹೊರಡಿಸಲು ಕೋರಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 30 ಮುಆಬಿ 2016, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ, ಮಲ್ಲೇಶ್ವರಂ ಶ್ರೀ ರಾಘವೇಂದ್ರ ಆಂಜನೇಯಸ್ವಾಮಿ ದೇವಾಲಯಕ್ಕೆ ಸೇರಿದ ಪಾಜಕ ಕಲ್ಯಾಣ ಮಂಟಪವನ್ನು ಮೀಸಲಾತಿಯಿಂದ ಹೊರತುಪಡಿಸಿ, ಅದಕ್ಕೆ ಬದಲಾಗಿ ಸದರಿ ದೇವಾಲಯಕ್ಕೆ ಸೇರಿದ ಈಗಾಗಲೇ

ಮೀಸಲಾತಿಯನ್ನು ನಿಗಧಿಪಡಿಸಿರುವ 3 ಅಂಗಡಿಗಳ ಜೊತೆಗೆ (2 ಅಂಗಡಿಗಳನ್ನು ಪರಿಶಿಷ್ಟ ಜಾತಿ ಒಂದು ಅಂಗಡಿ ಪರಿಶಿಷ್ಟ ಪಂಗಡದವರಿಗೆ) ಖಾಲಿ ಇರುವ ಉಳಿದ 3 ಅಂಗಡಿಗಳನ್ನು ಪರಿಶಿಷ್ಟ ಜಾತಿಯವರಿಗೆ ಮೀಸಲಿರಿಸಿ, ಇ–ಹರಾಜು ಮುಖಾಂತರ ಗುತ್ತಿಗೆ ನೀಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಮುಜರಾಯಿ)

**PR - 592**

**SC - 25**

## ಕಂದಾಯ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಕಂಇ 33 ಮುಆಬಿ 2016, ಬೆಂಗಳೂರು, ದಿನಾಂಕ: 11–08–2016.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 87 ಮುಆಬಿ 2012, ದಿನಾಂಕ: 29–09–2012ರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಸುಳ್ಯ ತಾಲ್ಲೂಕಿನ ಪುಟ ಸಂಖ್ಯೆ: (291) ಕ್ರಮ ಸಂಖ್ಯೆ: (42)ರಲ್ಲಿ ಈ ಕೆಳಗಿನಂತೆ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

| ಹಾಲಿ ಇರುವುದು | ತಿದ್ದುಪಡಿ ಪ್ರಕಾರ ಇರುವುದು |
|---|---|
| ಅಜ್ಜಾವರ ಗ್ರಾಮ, ಶ್ರೀ ನಾಗಪಟ್ಟಣ ಬೈಪಡಿತ್ತಾಯ ದೇವಸ್ಥಾನ | ನಾಗಪಟ್ಟಣ ಶ್ರೀ ಸದಾಶಿವ ದೇವಸ್ಥಾನ, ಅಲೆಟ್ಟಿ ಗ್ರಾಮ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರತ್ನಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ. (ಮುಜರಾಯಿ)

**PR-593**

**SC-25**

## ಕಂದಾಯ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಕಂಇ 109 ಮುಸೇವಿ 2015, ಬೆಂಗಳೂರು, ದಿನಾಂಕ: 19–08–2016.**

ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಮುಸೇವಿ 2015, ದಿನಾಂಕ: 29–01–2016ರ ಆದೇಶದಲ್ಲಿ ಕ್ಷೇತ್ರದ ಹಾಗೂ ಸಮಾಜ ಪ್ರತಿನಿಧಿಗಳ ಪಟ್ಟಿಯಲ್ಲಿ ಕ್ರಮ ಸಂಖ್ಯೆ: (4)ರಲ್ಲಿ **"ಶ್ರೀ ಜಿ. ವಿಮಲ್ ಭಂಡಾರಿ, ಗೌರಿವಿಲ್ಲಾ, ನಂ 27, 2ನೇ ಕ್ರಾಸ್, ಕುಮಾರ್ ಪಾರ್ಕ್ (ಪಶ್ಚಿಮ) ಬೆಂಗಳೂರು,** ಇವರ ಬದಲಾಗಿ **ಶ್ರೀ ಹೆಚ್.ಜಿ.ಡಿ. ರಾಜೇಂದ್ರ, ಎಂ.ಐ.ಜಿ. 13 ಸಂಸ್ಕೃತಿ ಕುವೆಂಪು ನಗರ ಹಾಸನ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರತ್ನಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

**PR-594**

**SC-50**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಸಿ.ಕೆ. ಮಹೇಂದ್ರ, ಅಬಕಾರಿ ಉಪ ಅಧೀಕ್ಷಕರು, ಕೋಲಾರ ಉಪ ವಿಭಾಗ, ಕೋಲಾರ, ಅವರು ಸಲ್ಲಿಸಿರುವ ಮೇಲ್ಮನವಿ – ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ :**

1. ಅಬಕಾರಿ ಆಯುಕ್ತರ ಆದೇಶ ಸಂಖ್ಯೆ: ಇಸಿಇ/ಬಿಎನ್‌ಜಿ/07/ಡಿಎಸ್‌ಸಿ(1)/2014, ದಿನಾಂಕ: 18–08–2015.
2. ಶ್ರೀ ಸಿ.ಕೆ. ಮಹೇಂದ್ರ, ಅಬಕಾರಿ ಉಪ ಅಧೀಕ್ಷಕರು, ಕೋಲಾರ ಉಪ ವಿಭಾಗ, ಕೋಲಾರ ಜಿಲ್ಲೆ, ಇವರ ಮೇಲ್ಮನವಿ ದಿನಾಂಕ: 18–11–2015.

**ಪ್ರಸ್ತಾವನೆ :**

ಶ್ರೀ ಸಿ.ಕೆ. ಮಹೇಂದ್ರ ಅಬಕಾರಿ ಉಪ ಅಧೀಕ್ಷಕರು, ಕೋಲಾರ ಉಪ ವಿಭಾಗ, ಕೋಲಾರ ಜಿಲ್ಲೆ, ಇವರು ಲೋಕಸಭಾ ಸಾರ್ವತ್ರಿಕ ಚುನಾವಣೆಗಳು–2014 ನೀತಿ ಸಂಹಿತೆಯು ಜಾರಿಯಲ್ಲಿದ್ದ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದಿಂದ ಪೂರ್ವ ಮಂಜೂರಾತಿ ಪಡೆಯದೇ ದಿನಾಂಕ: 12–03–2014 ರಿಂದ 31–03–2014 ರವರೆಗೆ ಪರಿವರ್ತಿತ ರಜೆ ಮಂಜೂರು ಮಾಡಲು ಹಾಗೂ ಕೇಂದ್ರ ಸ್ಥಾನ ಬಿಡಲು ಅನುಮತಿ ಕೋರಿ ತಮ್ಮ ಸಿಬ್ಬಂದಿ ಮೂಲಕ ಮನವಿ ಸಲ್ಲಿಸಿದ ಹಾಗೂ ರಜಾ ಮನವಿಯನ್ನು ತಿರಸ್ಕರಿಸಿ ಕರ್ತವ್ಯಕ್ಕೆ ಹಾಜರಾಗಲು ನೋಟೀಸ್ ಜಾರಿ ಮಾಡಿದ್ದರೂ ಸಹ ದಿನಾಂಕ: 06–04–2014ರವರೆಗೆ ಕರ್ತವ್ಯಕ್ಕೆ ಹಾಜರಾಗದೇ ಗೈರುಹಾಜರದ; ಕಾರ್ಯಕಾರಿ ಹುದ್ದೆಯಾದ ಅಬಕಾರಿ ಉಪ ಅಧೀಕ್ಷಕರು ಹುದ್ದೆಯ ಕರ್ತವ್ಯಗಳ ಪಟ್ಟಿಯ ಪ್ರಕಾರ ಅಬಕಾರಿ ಕೈಪಿಡಯಲ್ಲಿ ನಿರ್ದಿಷ್ಟಪಡಿಸಿರುವ ಕರ್ತವ್ಯಗಳನ್ನು ನಿರ್ವಹಿಸದೇ ಕರ್ತವ್ಯಲೋಪವೆಸಗಿದ ಆರೋಪಗಳಿಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆದು ಮೇಲೆ (1)ರಲ್ಲಿ ಓದಲಾದ ದಿನಾಂಕ: 18–08–2015ರ ಆದೇಶದಲ್ಲಿ ಅಬಕಾರಿ ಆಯುಕ್ತರು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (iii) ರನ್ವಯ ಸಿ.ಕೆ. ಮಹೇಂದ್ರ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಿಲ್ಲದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿದರು.

ಈ ದಂಡನಾ ಆದೇಶದ ವಿರುದ್ಧ ಶ್ರೀ ಸಿ.ಕೆ. ಮಹೇಂದ್ರರವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 18-11-2015ರ ಮೇಲ್ಮನವಿ ಸಲ್ಲಿಸಿ ದೋಷಾರೋಪಣಾ ಪಟ್ಟಿಗೆ ನೀಡಲಾದ ಸಮಜಾಯಿಷಿಯಲ್ಲಿ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲವೆಂದು, ಒಪ್ಪಿಕೊಳ್ಳದ ಆರೋಪಕ್ಕೆ ವಿಚಾರಣೆ ಇಲ್ಲದೆ ದಂಡನೆ ವಿಧಿಸಿರುವುದು ಕ್ರಮಬದ್ಧವಲ್ಲವೆಂದು ತಿಳಿಸಿದರು. ಮುಂದುವರೆದು, ಎರಡನೇ ಆರೋಪಕ್ಕೆ ಸಂಬಂಧಿಸಿದಂತೆ ತಾನು ಗುರಿ ಸಾಧನೆಗಾಗಿ ಎಲ್ಲಾ ಕ್ರಮಗಳನ್ನು ವಹಿಸಿದ್ದು ಇಲಾಖೆಯ ಇತರೆ ಉಪ ಅಧೀಕ್ಷಕರ ಸಾಧನೆಗಿಂತ ಉತ್ತಮ ಸಾಧನೆ ಮಾಡಿರುವುದಾಗಿ ತಿಳಿಸಿದ್ದಾರೆ.

ಈ ಪ್ರಕರಣವನ್ನು ಕೂಲಂಕಶವಾಗಿ ಪರಿಶೀಲಿಸಲಾಗಿದೆ. ಅಬಕಾರಿ ಆಯುಕ್ತರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11ರ ಕಾರ್ಯವಿಧಾನವನ್ನು ಅನುಸರಿಸಿ ದಿನಾಂಕ: 30-05-2015ರ ನೋಟೀಸ್‌ನೊಂದಿಗೆ ಎರಡು ಆರೋಪಗಳನ್ನು ಅನುಬಂಧ-1 ರಿಂದ 4 ರೊಂದಿಗೆ ಆರೋಪಿಗೆ ಜಾರಿ ಮಾಡಿದ್ದಾರೆ. ಈ ನೋಟೀಸಿಗೆ ಮೇಲ್ಮನವಿದಾರರು ದಿನಾಂಕ: 12-06-2015ರಂದು ಸಮಜಾಯಿಷಿ ನೀಡಿದ್ದಾರೆ. ಈ ಸಮಜಾಯಿಷಿಯಲ್ಲಿ ದಿನಾಂಕ: 11-03-2014ರಂದು ರಾತ್ರಿ ದೂರವಾಣಿ ಕರೆ ಬಂದಿದ್ದು, ತನ್ನ ತಾಯಿಯ ಎಡಕಾಲಿಗೆ ಗ್ಯಾಂಗ್ರಿನ್ ಆಗಿದ್ದು ತುರ್ತಾಗಿ ವೈದ್ಯಕೀಯ ಚಿಕಿತ್ಸೆ ಕೊಡಿಸಬೇಕಿದ್ದರಿಂದ ಅನಿವಾರ್ಯ ಪರಿಸ್ಥಿತಿಯಿಂದಾಗಿ ಜೊತೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಬಕಾರಿ ನಿರೀಕ್ಷಕರು (ಪ್ರ), ಕೋಲಾರ ಉಪ ವಿಭಾಗ ಇವರೊಂದಿಗೆ ರಜಾ ಮನವಿಯನ್ನು ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಲು ಸೂಚಿಸಿರುವುದಾಗಿ ತಿಳಿಸಿದ್ದಾರೆ. ವೈದ್ಯಕೀಯ ಚಿಕಿತ್ಸೆಗೆ ತಗುಲಬಹುದಾದ ಅವಧಿಯ ಸ್ಪಷ್ಟ ಚಿತ್ರಣ ಇಲ್ಲದ ಕಾರಣ ರಜೆ ಅರ್ಜಿಯಲ್ಲಿ ಅನಿರ್ದಿಷ್ಟಾವಧಿವರೆಗೆ ಎಂದು ಪದ ಬಳಸಿರುವುದಾಗಿ ತಿಳಿಸಿದ್ದಾರೆ. ಇನ್ನು ಎರಡನೇ ಆರೋಪದ ಕುರಿತು ತಾನು ರಜೆಯಲ್ಲಿದ್ದರೂ ಸಹ ದಿನಾಂಕ: 16-03-2014ರಂದು ಕೋಲಾರಕ್ಕೆ ಬಂದು ಮಾಹಿತಿದಾರ ನೀಡಿದ ಮಾಹಿತಿ ಮೇರೆಗೆ ಅಕ್ರಮವಾಗಿ ಸಾಗಿಸುತ್ತಿದ್ದ ಮದ್ಯ ಮತ್ತು ಮಾರುತಿ ಕಾರನ್ನು ವಶಪಡಿಸಿಕೊಂಡ ಮೊಕದ್ದಮೆ ದಾಖಲಿಸಲು ಸಿಬ್ಬಂದಿಗೆ ಸೂಚನೆ ನೀಡಿ ಬೆಂಗಳೂರಿಗೆ ಹಿಂದಿರುಗಿರುವುದಾಗಿ ತಿಳಿಸಿದ್ದಾರೆ. ಮುಂದುವರೆದು, ಕೋಲಾರದಲ್ಲಿ ಅಬಕಾರಿ ಉಪ ಅಧೀಕ್ಷಕನಾಗಿ ಕರ್ತವ್ಯಾವಧಿಯಲ್ಲಿ ಕೈಗೊಂಡ ನಿಗ್ರಹಣಾ ಕ್ರಮಗಳಿಂದಾಗಿ ತನ್ನ ಕಾರ್ಯ ಕ್ಷೇತ್ರದ ವ್ಯಾಪ್ತಿಯ ಗಡಿ ಭಾಗದಲ್ಲಿ ಹೆಚ್ಚಿನ ಚುನಾವಣಾ ಅಬಕಾರಿ ಅಕ್ರಮ ಪತ್ತೆಯಾಗಿದ್ದರೂ, ತನ್ನ ಕಾರ್ಯಕ್ಷೇತ್ರದ ವ್ಯಾಪ್ತಿಯಲ್ಲಿ ಚುನಾವಣಾ ಅಬಕಾರಿ ಅಕ್ರಮ ಪತ್ತೆಯಾಗಿರುವುದಿಲ್ಲವೆಂದು ತಿಳಿಸಿ 38 ಮೊಕದ್ದಮೆಗಳನ್ನು ದಾಖಲಿಸಿ ಅಕ್ರಮಗಳನ್ನು ನಿಯಂತ್ರಿಸಿ ರಾಜಸ್ವಕ್ಕೆ ಹೆಚ್ಚಿನ ಆದಾಯ ತರುವಲ್ಲಿ ಶ್ರಮಿಸಿರುತ್ತೇನೆಂದು ತಿಳಿಸಿರುವುದು ಕಂಡುಬರುತ್ತಿದೆ. ಆರೋಪಿ ನೀಡಿದ ಸಮಜಾಯಿಷಿಯನ್ನು ಪರಿಗಣಿಸಿ ದಿನಾಂಕ: 18-08-2015ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರವಾದ ಅಬಕಾರಿ ಆಯುಕ್ತರು ಆರೋಪಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (iii) ರಡಿ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಿಲ್ಲದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿರುವುದು ಕಂಡುಬಂದಿದೆ.

ಕರ್ನಾಟಕ ನಾಗರಿಕ ಸೇವೆಗಳು (ಸಿಸಿಎ) ನಿಯಮಾವಳಿಗಳು, 1957ರ ನಿಯಮ-11ರಡಿ ನೀಡಲಾದ ನೋಟೀಸಿಗೆ ಆರೋಪಿ ಸಲ್ಲಿಸುವ ಉತ್ತರವು ಶಿಸ್ತು ಪ್ರಾಧಿಕಾರಿಗೆ ಸಮರ್ಪಕವಾಗಿ ಕಂಡುಬಾರದಿದ್ದಲ್ಲಿ ವಿಚಾರಣಾಧಿಕಾರಿಗಳನ್ನು ನೇಮಿಸಿ, ವಿಚಾರಣಾ ವರದಿಯನ್ನು ಪಡೆದು ಅದರ ಪ್ರತಿಯನ್ನು ಆರೋಪಿತ ಸರ್ಕಾರಿ ನೌಕರನಿಗೆ ನೀಡಿ ಉತ್ತರ ನೀಡಲು ಅವಕಾಶ ಕಲ್ಪಿಸಬೇಕಾಗುತ್ತದೆ. ಈ ರೀತಿ ಉತ್ತರ ಸಲ್ಲಿಸಲ್ಪಟ್ಟಲ್ಲಿ ಅದನ್ನು ಪರಿಶೀಲಿಸಿ ತನ್ನ ಅಭಿಪ್ರಾಯವನ್ನು ದಾಖಲಿಸಿ ನಂತರ ನಿಯಮಗಳನುಸಾರ ದಂಡನೆ ವಿಧಿಸಬೇಕು. ಈ ವಿಧಿವಿಧಾನವು ಪ್ರಸ್ತುತ ಪ್ರಕರಣದಲ್ಲಿ ಪಾಲನೆ ಆಗಿರುವುದಿಲ್ಲ. ಈ ಕಾರಣದಿಂದಾಗಿ ಅಬಕಾರಿ ಆಯುಕ್ತರಿಂದ ದಂಡನೆ ವಿಧಿಸಿ ಹೊರಡಿಸಲ್ಪಟ್ಟ ದಿನಾಂಕ: 18-08-2015ರ ಆದೇಶವು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳಿಗೆ ಅನುಸಾರವಾಗಿರುವುದಿಲ್ಲ. ಈ ಅಂಶಗಳನ್ನು ಪರಿಗಣಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 127 ಇಪಿಎಸ್ 2015, ಬೆಂಗಳೂರು, ದಿನಾಂಕ: 23-08-2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 25 (2)(ಸಿ)(i)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶಿಸ್ತುಪ್ರಾಧಿಕಾರವಾದ ಅಬಕಾರಿ ಆಯುಕ್ತರ ದಂಡನಾ ಆದೇಶ ಸಂಖ್ಯೆ: ಇಸಿಇ/ಬಿಎನ್‌ಜಿ/07/ಡಿಎಸ್‌ಸಿ(1)2014, ದಿನಾಂಕ: 18-08-2015ನ್ನು ರದ್ದುಪಡಿಸುತ್ತದೆ. ಈ ಆದೇಶವನ್ನು ಹೊರಡಿಸದಿದ್ದಲ್ಲಿ ಶ್ರೀ ಸಿ.ಕೆ. ಮಹೇಂದ್ರ, ಅಬಕಾರಿ ಉಪ ಅಧೀಕ್ಷಕರು, ಕೋಲಾರ ಉಪ ವಿಭಾಗ, ಕೋಲಾರ ಜಿಲ್ಲೆ ಇವರು ಯಾವ ಸೌಲಭ್ಯಗಳನ್ನು ನಿಯಮಗಳನುಸಾರ ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

**PR - 595**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವೆಂಕಟೇಶ್. ಜಿ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ)

## URBAN DEVELOPMENT SECRETARIAT

**Sub:** Procedures for effecting NPS deductions of Government employees and AIS officers working on Foreign Service who come under the purview of NPS architecture set up by the PFRDA.

**Read:** 1) G.O. No. FD (Spl) 219 PEN 2012, Dated: 30-01-2014.

2) Letter from the Deputy Metropolitan Commissioner vide No. BMRDA/Accounts Section 23/2015-16, dated : 21-04-2016.

**Preamble:**

The Government of Karnataka vide Government order No. FD (spl) 219 PEN 2012, Dated : 30-01-2014 has directed the organizations that Government Employees and AIS officers working on Foreign Service and who come under the purview of NPS shall adopt the NPS architecture set up by the PFRDA for effecting NPS deductions and other related activities of such employees.

The Deputy Metropolitan Commissioner, BMRDA vide letter dated: 21-04-2016 read at (2) above has requested to designate Accounts officer, BMRDA as Non Treasury PAO and DDO for effecting NPS deductions. Hence, the following order.

**Government Order No. UDD 89 BMR 2016, Bengaluru, Dated: 29-08-2016**

Government of Karnataka is hereby designated the Accounts Officer of Bengaluru Metropolitan Regional Development Authority as Non Treasury Pay & Accounts Officer (PAO) and DDO under the NPS architecture set up by the PFRDA for effecting NPS deductions of Government Officers/ Employees and AIS officers working on Foreign Service in Bengaluru Metropolitan Region Development Authority.

**P.R. 596**
**S.C.50**

By Order and in the Name of the Governor of Karnataka,
**N. Narasimha Murthy,**
Under Secretary to Government,
Urban Development Department.

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿ ದರದಲ್ಲಿ ವಿತರಿಸಿದ ಅಲ್ಪಾವಧಿ ಕೃಷಿ ಸಾಲಗಳಿಗೆ ಬಡ್ಡಿ ಸಹಾಯಧನ ದರ ನಿಗಧಿಪಡಿಸಿ ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 183 ಸಿಎಲ್ಎಸ್ 2015, ದಿನಾಂಕ: 17–11–2015.
2. ಸರ್ಕಾರದ ಆದೇಶ ಸಂಖ್ಯೆ: ಸಿಒ 206 ಸಿಎಲ್ಎಸ್ 2014, ದಿನಾಂಕ: 18–09–2015.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ ಸಿಎಬಿ–1/2015–16, ದಿನಾಂಕ: 27–06–2016.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೈತರಿಗೆ ಸಹಕಾರ ಸಂಸ್ಥೆಗಳಿಂದ ₹. 3 ಲಕ್ಷಗಳವರೆಗಿನ ಅಲ್ಪಾವಧಿ ಕೃಷಿ ಸಾಲವನ್ನು ಶೂನ್ಯ ಬಡ್ಡಿ ದರದಲ್ಲಿ ನೀಡುವ ಯೋಜನೆಯನ್ನು 2015–16ನೇ ಸಾಲಿಗೆ ಜಾರಿಗೊಳಿಸಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2014–15ನೇ ಸಾಲಿನಲ್ಲಿ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿ ದರದಲ್ಲಿ ವಿತರಿಸಿದ ಅಲ್ಪಾವಧಿ ಕೃಷಿ ಸಾಲಗಳಿಗೆ ನಬಾರ್ಡ್‌ವತಿಯಿಂದ ಒದಗಿಸಲಾಗಿರುವ ಶೇ. 3ರ ಬಡ್ಡಿ ಸಹಾಯಧನವನ್ನು ಪರಿಗಣಿಸಿ ಇದನ್ನು ಅಳವಡಿಸಿಕೊಂಡು ಶೇ. 7ರ ಬಡ್ಡಿ ಸಹಾಯಧನ ನಿಗಧಿಪಡಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2015–16ನೇ ಸಾಲಿನಲ್ಲಿ ಶೂನ್ಯ ಬಡ್ಡಿ ದರದಲ್ಲಿ ವಿತರಿಸಿದ ಬೆಳೆ ಸಾಲಗಳಿಗೆ ಶೇ. 7.5ರ ಬಡ್ಡಿ ಸಹಾಯಧನ ನಿಗಧಿಪಡಿಸಲು ಮತ್ತು ಕೇಂದ್ರ ಸರ್ಕಾರದಿಂದ ಲಭ್ಯವಾಗುವ ಶೇ. 3ರ ಪ್ರೋತ್ಸಾಹವನ್ನು ಅಳವಡಿಸಿಕೊಳ್ಳಲು ಹಾಗೂ ಈ ಪ್ರೋತ್ಸಾಹ ಧನದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಪಾಲು ಹಾಗೂ ಡಿ.ಸಿ.ಸಿ ಬ್ಯಾಂಕುಗಳ ಪಾಲನ್ನು ನಿಗಧಿಪಡಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 486 ಸಿಎಲ್ಎಸ್ 2016, ಬೆಂಗಳೂರು, ದಿನಾಂಕ: 24–08–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2015–16ನೇ ಸಾಲಿನಲ್ಲಿ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿ ದರದಲ್ಲಿ ವಿತರಿಸುವ ಅಲ್ಪಾವಧಿ ಕೃಷಿ ಸಾಲಗಳಿಗೆ ಕೇಂದ್ರ ಸರ್ಕಾರದಿಂದ ಒದಗಿಸಲಾಗುವ ಶೇ. 3ರ ಬಡ್ಡಿ ಸಹಾಯಧನವನ್ನು ಪರಿಗಣಿಸಿ ಇದನ್ನು ಅಳವಡಿಸಿಕೊಂಡು ಶೇ. 7ರ ಬಡ್ಡಿ ಸಹಾಯಧನ ನಿಗಧಿಪಡಿಸಿ ಆದೇಶಿಸಲಾಗಿದೆ.

ಕೇಂದ್ರ ಸರ್ಕಾರದಿಂದ ಲಭ್ಯವಾಗುವ ಶೇ. 3ರ ಪ್ರೋತ್ಸಾಹ ಧನದಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳಿಗೆ ಶೇ. 0.50 ಮತ್ತು ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳಿಗೆ ಶೇ. 2.50 ಪಾಲು ನಿಗಧಿಪಡಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಎಫ್‌ಡಿ 146 ಇಎಕ್ಸ್‌ಪಿ–2/2016, ದಿನಾಂಕ: 11–08–2016 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

**PR - 598**
**SC- 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ರಾಧಕೃಷ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ–3
ಸಹಕಾರ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕೇಂದ್ರ ಸರ್ಕಾರದ ನೆರವಿನೊಂದಿಗೆ ಖಾಸಗಿ ಸಹಭಾಗಿತ್ವದಡಿಯಲ್ಲಿ ಅಡ್ವಾನ್ಸಡ್ ಟ್ರೈನಿಂಗ್ ಇನ್ಸಿಟ್ಯೂಟ್‌ನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ: ಉತನಿ/ ತರಬೇತಿ/ಯೋ–2/ವಿವ–19(ಭಾಗ–2)/2010–11, ದಿನಾಂಕ: 04–02–2016.
2. ಸಚಿವ ಸಂಪುಟ ಟಿಪ್ಪಣಿ ವಿಷಯ ಸಂಖ್ಯೆ: ಸಿ:399/2016.
3. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಸಚಿವ ಸಂಪುಟ), ಸಚಿವ ಸಂಪುಟ ವ್ಯವಹಾರಗಳ ಇಲಾಖೆ, ವಿಧಾನಸೌಧ, ಇವರ ಪ್ರಕರಣ ಸಂಖ್ಯೆ: ಸಿ:399/2016, ದಿನಾಂಕ: 16–08–2016.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಇವರ ಪತ್ರದಲ್ಲಿ ಕೇಂದ್ರ ಸರ್ಕಾರದ ನೆರವಿನೊಂದಿಗೆ ಖಾಸಗಿ ಸಹಭಾಗಿತ್ವದಲ್ಲಿ ಉನ್ನತ ತರಬೇತಿ ಸಂಸ್ಥೆ Advanced Training Institute ಅನ್ನು ರಾಜ್ಯದಲ್ಲಿ ಸ್ಥಾಪಿಸಲು ಬಳ್ಳಾರಿ ನಗರವನ್ನು ಆಯ್ಕೆ ಮಾಡಲಾಗಿದೆ. ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಳ್ಳಾರಿ ರವರ ಪ್ರಕಾರ ನಿರ್ಮಿತ ಕಟ್ಟಡ ಪ್ರದೇಶವು ಸೇರಿದಂತೆ ಒಟ್ಟಾರೆ ಅಂದಾಜು 14 ಎಕರೆ ಜಮೀನು ಲಭ್ಯವಿರುವುದಾಗಿ, ಅದರಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡ, ಸಿ.ಒ.ಇ. ಕಟ್ಟಡ ಮತ್ತು ವಸತಿ ನಿಲಯ ಮುಂತಾದವುಗಳಿಗೆ 4666 ಚದರ ಮೀಟರ್‌ಗಳಲ್ಲಿ ಕಟ್ಟಡವನ್ನು ನಿರ್ಮಿಸಲಾಗಿದ್ದು, ಉಳಿದ ಪ್ರದೇಶವು ಉನ್ನತ ತರಬೇತಿ ಸಂಸ್ಥೆ (Advanced Training Institute) ಅನ್ನು ಸ್ಥಾಪಿಸಲು ಲಭ್ಯವಿರುವುದಾಗಿ ಮಾಹಿತಿಯನ್ನು ನೀಡಿರುತ್ತಾರೆ.

Advanced Training Institute ಅನ್ನು ಪ್ರಾರಂಭಿಸಲು ಸುಮಾರು 6 ರಿಂದ 7 ಎಕರೆ ಜಮೀನು ಬೇಕಾಗಿದ್ದು, ಪ್ರಸಕ್ತ ಬಳ್ಳಾರಿ ಕೈಗಾರಿಕಾ ತರಬೇತಿ ಸಂಸ್ಥೆಯ ಆವರಣದಲ್ಲಿ 5 ಎಕರೆ ಜಮೀನು ಮಾತ್ರ ಲಭ್ಯವಿದ್ದು, ಇದನ್ನು ಸದರಿ ಸಂಸ್ಥೆಯನ್ನು ರಾಜ್ಯದಲ್ಲಿ ಸ್ಥಾಪಿಸಲು ಡಿ.ಜಿ.ಟಿ. ಕೌಶಲ್ಯ ಅಭಿವೃದ್ಧಿ ಮತ್ತು ಉದ್ಯಮಶೀಲತೆ ಮಂತ್ರಾಲಯ, ನವದೆಹಲಿ ಇವರಿಗೆ ಲೀಸ್ ಡೀಡ್ ಮುಖಾಂತರ ಹಸ್ತಾಂತರಿಸಬೇಕಾಗಿರುತ್ತದೆ. ಕೇಂದ್ರ ಸರ್ಕಾರವು ಕೋರಿರುವಂತೆ ಲೀಸ್ ಅವಧಿಯು ಕಟ್ಟಡ ಕಾಮಗಾರಿಯ ಅವಧಿಯನ್ನು ಹೊರತುಪಡಿಸಿ 15 ವರ್ಷಗಳಾಗಿದ್ದು, ತದನಂತರ ರಾಜ್ಯ ಸರ್ಕಾರವು ಇಚ್ಛಿಸಿದಲ್ಲಿ ಮುಂದೆ ಲೀಸ್ ಅವಧಿಯನ್ನು ಮುಂದಿನ 10 ವರ್ಷಗಳವರೆಗೂ ವಿಸ್ತರಿಸಬಹುದಾಗಿದೆ. ನಂತರ ಕಡ್ಡಾಯವಾಗಿ ರಾಜ್ಯ ಸರ್ಕಾರಕ್ಕೆ ಹಿಂತಿರುಗಿಸಲಾಗುತ್ತದೆ. ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ/ ವೃತ್ತಿ ಶಿಕ್ಷಣ ನಿರತ ಬೋಧಕರು ಸರ್ಕಾರಿ ಹಾಗೂ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಎನ್.ಸಿ.ವಿ.ಟಿ. ಕೋರ್ಸ್‌ಗಳನ್ನು ಬೋಧನೆ ಮಾಡಲು ಮುಂದಿನ 3 ವರ್ಷಗಳಲ್ಲಿ ಕಡ್ಡಾಯವಾಗಿ C.I.T.S. ತರಬೇತಿ ಹೊಂದಿದವರಾಗಬೇಕು ಎಂಬ ಡಿ.ಜಿ.ಟಿ. ನವದೆಹಲಿ ರವರ ಮಾನದಂಡವಾಗಿದ್ದು, ಪ್ರಸಕ್ತ ಈ ತರಬೇತಿ ಪಡೆದಿರುವ ಬೋಧಕರ ಸಂಖ್ಯೆಯು ದೇಶದಲ್ಲಿ ಪ್ರಸಕ್ತ ಕೇವಲ ಶೇ. 15 ರಷ್ಟಿದ್ದು, ಮಾನದಂಡದ ಅನ್ವಯ ಕನಿಷ್ಠ 70,000 ತರಬೇತಿ ಪಡೆದ ಬೋಧಕರ ಅವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿ, ಬೋಧಕರಿಗೆ ತರಬೇತಿ ಕೇಂದ್ರ ಸ್ಥಾಪನೆ ಅತ್ಯವಶ್ಯಕವಾಗಿದ್ದು, 15 ವರ್ಷಗಳ ತರುವಾಯ ಸದರಿ ಜಮೀನು ರಾಜ್ಯ ಸರ್ಕಾರಕ್ಕೆ ಹಿಂಪಡೆಯಬಹುದಾಗಿದ್ದು, ಕೌಶಲ್ಯ ಅಭಿವೃದ್ಧಿ ಹಾಗೂ ಉನ್ನತ ತರಬೇತಿ ಸಂಸ್ಥೆ (Advanced Training Institute) ಯೋಜನೆಗೆ ನೆರವಾಗಲು ಕೋರಿರುವ ಜಮೀನನ್ನು (5ಎಕರೆ) ಡಿ.ಜಿ.ಟಿ. ನವದೆಹಲಿ ಇವರಿಗೆ ಲೀಸ್ ಡೀಡ್ ನೊಂದಿಗೆ ಹಸ್ತಾಂತರಿಸಬಹುದಾಗಿದೆ. ಸದರಿ ಜಮೀನು ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಳ್ಳಾರಿ ರವರ ಹೆಸರಿನಲ್ಲಿರುವುದರಿಂದ ರಾಜ್ಯ ಸರ್ಕಾರದ ಪರವಾಗಿ ಇವರಿಗೆ ಲೀಸ್ ಡೀಡ್‌ನ್ನು ಸಹಿ ಮಾಡಲು ಅನುಮತಿ ನೀಡಬಹುದಾಗಿದೆ. ಸದರಿ ಪ್ರಸ್ತಾವನೆಗೆ ಮಾನ್ಯ ಕಾರ್ಮಿಕ ರಾಜ್ಯ ಸಚಿವರ ಅನುಮೋದನೆಯೊಂದಿಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸಚಿವ ಸಂಪುಟ ಟಿಪ್ಪಣಿಯಲ್ಲಿ ಈ ಕೆಳಕಂಡ ಅಂಶಗಳಿಗೆ ಅನುಮೊದನೆ ನೀಡುವಂತೆ ಕೋರಲಾಗಿತ್ತು.

1. ಕೇಂದ್ರ ಸರ್ಕಾರದ ನೆರವಿನೊಂದಿಗೆ ಖಾಸಗಿ ಸಹಭಾಗಿತ್ವದಡಿಯಲ್ಲಿ ರಾಜ್ಯದ ಬಳ್ಳಾರಿ ನಗರದಲ್ಲಿ ಅಡ್ವಾನ್ಸ್‌ಡ್ ಟ್ರೈನಿಂಗ್ ಇನ್‌ಸ್ಟ್ಯೂಟ್‌ನ್ನು ಪ್ರಾರಂಭಿಸುವುದು.
2. ಸದರಿ ಉದ್ದೇಶಕ್ಕೆ ರಾಜ್ಯ ಸರ್ಕಾರದ ವತಿಯಿಂದ ಅಗತ್ಯವಿರುವ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ರಾಜ್ಯ ಸರ್ಕಾರದ ಉದ್ಯೋಗ ಮತ್ತು ತರಬೇತಿ ಇಲಾಖೆಯ ಪರವಾಗಿ ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಳ್ಳಾರಿ ಇವರ ಹೆಸರಿನಲ್ಲಿರುವ 5 ಎಕರೆ ಜಮೀನನ್ನು DGE (Directorate General of Employment) ನವದೆಹಲಿ ಕೌಶಲ್ಯ ಅಭಿವೃದ್ಧಿ ಮತ್ತು ಉದ್ಯಮಶೀಲತೆ ಇಲಾಖೆ, ನವದೆಹಲಿ, ಭಾರತ ಸರ್ಕಾರ ಇವರಿಗೆ ಲೀಸ್ ಡೀಡ್ ಮೂಲಕ ಪ್ರಾಜೆಕ್ಟ್‌ನ ಕನ್‌ಸಿಷನ್ ಅವಧಿ 15 ವರ್ಷಗಳವರೆಗೆ (ನಿರ್ಮಾಣ ಅವಧಿಯನ್ನು ಹೊರತುಪಡಿಸಿ) ಹಸ್ತಾಂತರಿಸಲು ಮತ್ತು ಲೀಸ್ ಡೀಡ್‌ನಲ್ಲಿ ಸಹಿ ಮಾಡಲು ಪ್ರಾತ್ಯಾಧಿಕಾರವನ್ನು ನೀಡುವುದು.
3. ಸದರಿ ಸಂಸ್ಥೆಯು ಕೇಂದ್ರ ಸರ್ಕಾರದ ಕೌಶಲ್ಯ ಅಭಿವೃದ್ಧಿ ಮತ್ತು ಉದ್ಯಮಶೀಲತೆ ಇಲಾಖೆ, DGE (Directorate General of Employment) ನವದೆಹಲಿ ಭಾರತ ಸರ್ಕಾರದ ನಿಯಮಗಳ ಅಡಿಯಲ್ಲಿ ಮತ್ತು ಕಾಲಕಾಲಕ್ಕೆ ಜಾರಿಯಾಗುವ ನಿಯಮಗಳು/ ಮಾರ್ಗಸೂಚಿಯಂತೆ ಕಾರ್ಯನಿರ್ವಹಿಸುವುದು.

ಮೇಲೆ (3)ರಲ್ಲಿ ಓದಲಾದ ಸಚಿವ ಸಂಪುಟದ ನಿರ್ಣಯದಲ್ಲಿ ಸಚಿವ ಸಂಪುಟ ಟಿಪ್ಪಣಿಯ ಕಂಡಿಕೆ 50ರಲ್ಲಿ ಒಳಗೊಂಡಿರುವ ಪ್ರಸ್ತಾವನೆಗಳನ್ನು ಸಚಿವ ಸಂಪುಟವು ಅನುಮೋದಿಸುತ್ತಾ, ರಾಜ್ಯದಲ್ಲಿ ಕೇಂದ್ರ ಸರ್ಕಾರದ ನೆರವಿನೊಂದಿಗೆ ಖಾಸಗಿ ಸಹಭಾಗಿತ್ವದಡಿಯಲ್ಲಿ ಅಡ್ವಾನ್ಸ್‌ಡ್ ಟ್ರೈನಿಂಗ್ ಇನ್‌ಸ್ಟ್ಯೂಟ್‌ನ್ನು ಸ್ಥಾಪಿಸಲು ಅಗತ್ಯವಿರುವ 5 ಎಕರೆ ಜಮೀನಿಗೆ ವಾರ್ಷಿಕ ಒಂದು ರೂಪಾಯಿಯಂತೆ ಗುತ್ತಿಗೆ ದರವನ್ನು ನಿಗಧಿಪಡಿಸಲು ಸಚಿವ ಸಂಪುಟವು ನಿರ್ಧರಿಸಿತು.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 298 ಇಟಿಐ 2015, ಬೆಂಗಳೂರು, ದಿನಾಂಕ: 30-08-2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಕೇಂದ್ರ ಸರ್ಕಾರದ ನೆರವಿನೊಂದಿಗೆ ಖಾಸಗಿ ಸಹಭಾಗಿತ್ವದಡಿಯಲ್ಲಿ ಅಡ್ವಾನ್ಸ್‌ಡ್ ಟ್ರೈನಿಂಗ್ ಇನ್‌ಸ್ಟ್ಯೂಟ್‌ನ್ನು ಸ್ಥಾಪಿಸಲು ಅಗತ್ಯವಿರುವ 5 ಎಕರೆ ಜಮೀನನ್ನು ಗುತ್ತಿಗೆ ಆಧಾರದಲ್ಲಿ ವಾರ್ಷಿಕ ಒಂದು ರೂಪಾಯಿಯಂತೆ ಗುತ್ತಿಗೆ ದರವನ್ನು ನಿಗಧಿಪಡಿಸಿ ನೀಡಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 397 ವೆಚ್ಚ-9/2016, ದಿನಾಂಕ: 27-06-2016 ರಲ್ಲಿ ನೀಡಿರುವ ಸಹಮತಿಯನ್ವಯ ಮತ್ತು ಸಚಿವ ಸಂಪುಟವು ಪ್ರಕರಣ ಸಂಖ್ಯೆ: ಸಿ:399/2016, ದಿನಾಂಕ; 16-08-2016 ರ ಮೂಲಕ ನೀಡಿರುವ ಅನುಮೋದನೆಯ ಅನ್ವಯ ಹೊರಡಿಸಲಾಗಿದೆ.

PR - 599
SC- 50

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಸ್. ಮಂಜುನಾಥ್,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

## ಕಾರ್ಮಿಕ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಭೂದಾನಿಗಳ ಹೆಸರನ್ನು ಇಡಲು ಮಂಜೂರಾತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಾಇ 113 ಇಟಿಐ 2016, ದಿನಾಂಕ: 03–05–2016.

2. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ರವರ ಪತ್ರ ಸಂಖ್ಯೆ: ಉತನಿ/ತ/ಕಟ್ಟಡ–1/ವಿವ–51/2004–05, ದಿನಾಂಕ: 05–03–2016 ಮತ್ತು 11–05–2016.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಸ್ವಂತ ಕಟ್ಟಡ ನಿರ್ಮಿಸಲು ಸರ್ಕಾರಿ ಜಮೀನು ಲಭ್ಯವಿಲ್ಲದೆ ಇರುವ ಸ್ಥಳಗಳಲ್ಲಿ DGET (Directorate General of Employment Training) ನಿಯಮಾನುಸಾರ ಹಾಗೂ ಮುಂದಿನ ದಿನಗಳಲ್ಲಿ ಸರ್ಕಾರಿ ಕೈಗರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಣಗೊಳಿಸಲು ಕನಿಷ್ಠ 1.5 ಎಕರೆಗಿಂತ ಹೆಚ್ಚಿನ ಜಮೀನನ್ನು ದಾನವಾಗಿ ನೀಡುವ ದಾನಿಗಳ ಹೆಸರಿಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (2)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ತರೀಕೆರೆ ತಾಲ್ಲೂಕು, ಕಸಬಾ, ಹೋಬಳಿ, ಮಾಚೇನಹಳ್ಳಿ, ಗ್ರಾಮದ ಸರ್ವೆ ನಂ. 116ರಲ್ಲಿ 5.09 ಎಕರೆ ಸರ್ಕಾರಿ ಬಾಲಕರ ಮಾಧ್ಯಮಿಕ ಶಾಲೆಯ ಸ್ವಾಧೀನದಲ್ಲಿರುವ ಭೂದಾನದ ಜಮೀನನ್ನು ಸರ್ಕಾರದ ಆದೇಶದ ಸಂಖ್ಯೆ: ಆರ್‌ಡಿ 11 ಎಲ್‌ಜಿಡಬ್ಲ್ಯೂ, ದಿನಾಂಕ: 20–05–71 ಮತ್ತು ಕರ್ನಾಟಕ ಭೂಕಂದಾಯ ಕಾಯಿದೆ 1964ರ ಕಲಂ 71 ರ ಪ್ರಕಾರ ಸರ್ಕಾರಿ ಕೈಗಾರಿಕಾ ಸಂಸ್ಥೆ, ತರೀಕೆರೆಯ ಕಟ್ಟಡ ನಿರ್ಮಾಣಕ್ಕಾಗಿ ವರ್ಗಾವಣೆ ಮಾಡಿ ಆದೇಶಿಸಲಾಗಿರುತ್ತದೆ. ತರೀಕೆರೆ ಪುರಸಭೆ ಮಾಜಿ ಅಧ್ಯಕ್ಷರು ಹಾಗೂ ಹಾಲಿ ಸದಸ್ಯರಾಗಿರುವ ಶ್ರೀ ಡಿ.ವಿ. ಪದ್ಮರಾಜು ರವರು ಮೇಲೆ ತಿಳಿಸಿದ ನಿವೇಶನವು ಸದರಿಯವರ ತಾತನವರಾದ ಶ್ರೀ ದೊಡ್ಡಮನೆ ಪುಟ್ಟಯ್ಯನವರು ರಾಜ ಪ್ರಮುಖರ ಹೆಸರಿಗೆ ದಾನ ಕೊಟ್ಟಂತಹ ನಿವೇಶನವಾಗಿದ್ದು, ಅವರ ಪೂರ್ವಜರ ಹೆಸರು ಅಜರಾಮರಾಗುವಂತೆ ಹಾಗೂ ದಾನ ಮುಂತಾದ ಕೈಂಕರ್ಯಗಳಲ್ಲಿ ಬೇರೆಯವರಿಗೂ ಪ್ರೇರಣೆಯಾಗುವಂತೆ ಸಂಸ್ಥೆಯ ಕಟ್ಟಡಕ್ಕೆ ಶ್ರೀ ದೊಡ್ಡಮನೆ ಪುಟ್ಟಯ್ಯನವರ ಹೆಸರನ್ನು ನಾಮಕರಣಮಾಡಲು ಕೋರಿದ್ದು, ಈ ಬಗ್ಗೆ ಮಾನ್ಯ ಶ್ರೀ ಜಿ.ಹೆಚ್. ಶ್ರೀನಿವಾಸ, ಶಾಸಕರು ತರೀಕೆರೆ ವಿಧಾನಸಭಾ ಕ್ಷೇತ್ರ ಇವರ ಸಮಕ್ಷಮದಲ್ಲಿ ಚರ್ಚೆಯಾಗಿರುತ್ತದೆಂದು ತಿಳಿಸಿರುತ್ತಾರೆ. ಮಾನ್ಯ ತರೀಕೆರೆ ಶಾಸಕರು ಹೊಸದಾಗಿ ನಿರ್ಮಾಣವಾಗುತ್ತಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡಕ್ಕೆ ಶ್ರೀ ದೊಡ್ಡಮನೆ ಪುಟ್ಟಯ್ಯನವರ ಹೆಸರನ್ನು ನಾಮಕರಣ ಮಾಡುವಂತೆ ಕೋರಿರುತ್ತಾರೆ. ಹಾಗಾಗಿ ಸದರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಸ್ವಂತ ಕಟ್ಟಡ ಹೊಂದುವ ಸಲುವಾಗಿ ನಬಾರ್ಡ್–ಆರ್‌ಐಡಿಎಫ್–20ರಲ್ಲಿ ಕಟ್ಟಡ ಕಾಮಗಾರಿಗೆ ರೂ. 300.04 ಲಕ್ಷ ಮಂಜೂರಾಗಿದ್ದು, ಕಟ್ಟಡ ಕಾಮಗಾರಿ ಪ್ರಾರಂಭಿಕ ಹಂತದಲ್ಲಿರುತ್ತದೆ. ಆದುದರಿಂದ ಈ ಸಂಸ್ಥೆಯ ಕಟ್ಟಡಕ್ಕೆ ಜಮೀನು ನೀಡುತ್ತಿರುವ " ದೊಡ್ಡಮನೆ ಪಟ್ಟಯ್ಯನವರ ಹೆಸರನ್ನು ನಾಮಕರಣ ಮಾಡಲು ಸೂಕ್ತ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 184 ಇಟಿಐ 2016, ಬೆಂಗಳೂರು, ದಿನಾಂಕ: 23–08–2016**

ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ತರೀಕೆರೆ ತಾಲ್ಲೂಕು, ಕಸಬಾ, ಹೋಬಳಿ, ಮಾಚೇನಹಳ್ಳಿ, ಗ್ರಾಮದ ಸರ್ವೆ ನಂ. 116ರಲ್ಲಿ 5.09 ಎಕರೆ ಸರ್ಕಾರಿ ಬಾಲಕರ ಮಾಧ್ಯಮಿಕ ಶಾಲೆಯ ಸ್ವಾಧೀನದಲ್ಲಿರುವ ಭೂದಾನದ ಜಮೀನಿನಲ್ಲಿರುವ ತರೀಕೆರೆ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡಕ್ಕೆ ಶ್ರೀ ದೊಡ್ಡಮನೆ ಪುಟ್ಟಯ್ಯನವರ ಹೆಸರನ್ನು ನಾಮಕರಣ ಮಾಡಲು ಸರ್ಕಾರದ ಅನುಮತಿ ನೀಡಿ ಆದೇಶಿಸಿದೆ.

PR - 600
SC-50

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಸ್. ಮಂಜುನಾಥ್,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

## ಸಾರಿಗೆ ಸಚಿವಾಲಯ

**ವಿಷಯ :** ಸಚಿವಾಲಯದ ಸಾರಿಗೆ ಇಲಾಖೆಯಲ್ಲಿ ಜಾಗೃತ ಕೋಶ ಸೃಜಿಸಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14–03–2016.

2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22–06–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ 1988 ನ್ನು ಪರಿಣಾಮಕಾರಿಯಾಗಿ ಜಾರಿಗೆ ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹದಳವನ್ನು Anti Corruption Bureau ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ನೀಡಲಾಗಿದೆ. ಮುಂದುವರೆದು, ಸದರಿ ಮಾರ್ಗಸೂಚಿಯನ್ವಯ ಕರ್ನಾಟಕ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್

ಇಲಾಖೆಗಳನ್ನೊಳಗೊಂಡಂತೆ ನಿರ್ದೇಶನಾಲಯ / ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳ ಕೇಂದ್ರ ಸ್ಥಾನದ ಕಚೇರಿಗಳಲ್ಲಿ ಒಂದು ಜಾಗೃತ ಕೋಶ ರಚಿಸಬೇಕಾಗಿದೆ. ಈ ಜಾಗೃತ ಕೋಶಕ್ಕೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯು ಮುಖ್ಯಸ್ಥರಾಗಿರುತ್ತಾರೆ ಹಾಗೂ ಇಲಾಖಾ/ಸಂಸ್ಥೆಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in Seniority) ಮುಖ್ಯ ಜಾಗೃತ ಅಧಿಕಾರಿಯನ್ನಾಗಿ ನೇಮಿಸಬೇಕಾಗಿದ್ದು ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಾರಿಇ 52 ಸಾಇಸೇ 2016, ಬೆಂಗಳೂರು, ದಿನಾಂಕ: 06-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಚಿವಾಲಯದ ಸಾರಿಗೆ ಇಲಾಖೆಯಲ್ಲಿ ಜಾಗೃತ ಕೋಶ ಸೃಜಿಸಿ, ಸರ್ಕಾರದ ಉಪ ಕಾರ್ಯದರ್ಶಿ, ಸಾರಿಗೆ ಇಲಾಖೆ, ಇವರನ್ನು ಮುಖ್ಯ ಜಾಗೃತ ಅಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಮುಖ್ಯ ಜಾಗೃತ ಅಧಿಕಾರಿಯ ಕರ್ತವ್ಯಗಳ ಪಟ್ಟಿಯನ್ನು ಪ್ರತ್ಯೇಕವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಿಂದ ಹೊರಡಿಸಲಾಗುವುದು.

**PR - 601**
**SC-100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕರ್ನಾಟಕ ಸರ್ಕಾರದ ಸಚಿವಾಲಯ
ಸಾರಿಗೆ ಇಲಾಖೆ.

## HOME SECRETARIAT

**Subject :** Appointment of Chairman to the State Police Complaints Authority – Reg.

**Read :**
1) The Karnataka Police (Amendment) Act, 2012 issued vide Special Gazette dated : 09-08-2012.
2) Notification No. HD 208 PoSaEe 2012, dated : 04-09-2012.
3) Government Order No. HD 208 PoSaEe 2012, dated : 24-07-2013.
4) Government Letter dated HD 165 PoSiAa 2016, dated : 02-08-2016 and 31-08-2016.
5) Letter No. RPS.50/2011 dated : 09-08-2016 and 01-09-2016 of the Registrar General, High Court of Karnataka, Bengaluru.

**Preamble:**

In the Special Gazette read at (1) above, State Government has amended the Karnataka Police Act, 1963 (Karnataka Act No. 4 of 1964) and made suitable amendment to Section 20 of the Act and made provisions to constitute the State Police Complaints Authority under Section 20C.

In the Notification dated : 04-09-2012 read at (2) above, Government has constituted the State Police Complaints Authority and the District Police Compaints Authority for the purpose of exercising such functions and discharging such duties as may be assigned to it, by or under Section 20C and 20D of the Karnataka Police Act, 1963 (Karnataka Act 4 of 1964).

In the Government Order dated 24-07-2013 read at (3) and in pursuance of the Section 20C of the Karnataka Police (Amendment) Act, 2012 the Government of Karnataka had appointed Hon'ble Justice M.P. Chinnappa, former Judge of the High Court of Karnataka as Chairman of the State Police Complaints Authority. As per the Section 20C (3) every non-official member of the State Police Complaints Authority shall hold office for a period of three years. Accordingly the serving period of Hon'ble Justice M.P. Chinnappa has ended on 01-09-2016. Hence the State Government has initiated the process to make appointment to the post of Chairman of State Police Complaints Authority.

As per the provisions of the Act, in the letter dated 02-08-2016 and 31-08-2016 read at (4) above, panel of names of retired Hon'ble High Court Judges was sought from the Registrar General, High Court of Karnataka. Accordingly in letters dated 09-08-2016 and 01-09-2016 read at (5), the Registrar General, High Court of Karnataka sent panel of names of retired High Court Judges as recommended by the Chief Justice of High Court of Karnataka.

Government of Karnataka after examining the same is pleased to pass the following order.

**Government Order No. HD 165 POSIAA 2016, Bengaluru, dated : 19-09-2016**

In the circumstances explained above and in pursuance of section 20C of the Karnataka Police (Amendment) Act, 2012 Government of Karnataka is pleased to appoint Hon'ble Justice A.S. Pachhapure, former Judge of High Court of Karnataka as the Chairman of the State Police Complaints Authority.

The terms and conditions of the Chairman, State Police Complaints Authority will be issued separately.

**P.R. 623**
**S.C. 100**

By order and in the name of the Governor of Karnataka
**T. Krishnaiah**
Under Secretary to Government,
Home Department. (Police Services-B)

## ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀಮತಿ ಜಿ.ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕಿ, ಭಾಷಾಂತರ ನಿರ್ದೇಶನಾಲಯ–ಇವರಿಗೆ ಏಕಪಕ್ಷೀಯವಾಗಿ ಅಪೀಲು ಇತ್ಯರ್ಥಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಆದೇಶ ಸಂಖ್ಯೆ: ಭಾನಿ 61 ಆಡಳಿತ 2010, ದಿನಾಂಕ: 21.05.2015.
2) ಶ್ರೀಮತಿ ಜಿ. ಸೌಮ್ಯಶ್ರೀ, ದ್ವಿ.ದ.ಸ. – ಇವರ ಮೇಲ್ಮನವಿ ದಿನಾಂಕ : 03–06–2015.
3) ಪತ್ರ ಸಂಖ್ಯೆ : ಭಾನಿ 61 ಆಡಳಿತ 2010, ದಿನಾಂಕ : 09–06–2015.
4) ಪತ್ರ ಸಂಖ್ಯೆ : ಭಾನಿ 61 ಆಡಳಿತ 2010, ದಿನಾಂಕ : 09–09–2015.
5) ಪತ್ರ ಸಂಖ್ಯೆ : ಭಾನಿ 61 ಆಡಳಿತ 2010, ದಿನಾಂಕ : 18–09–2015.
6) ಇದೇ ಸಮಸಂಖ್ಯೆಯ ಸೂಚನಾಪತ್ರ ದಿನಾಂಕ : 20–02–2016, 04–03–2016, 04–04–2016, 07–05–2016 ಮತ್ತು 29–06–2016.
7) ವಿಜಯವಾಣಿ ದಿನಪತ್ರಿಕೆಯ ದಿನಾಂಕ : 14–07–2016.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ–ಇವರು ಶ್ರೀಮತಿ ಜಿ.ಸೌಮ್ಯಶ್ರೀ ದ್ವಿತೀಯ ದರ್ಜೆ ಸಹಾಯಕಿ, ಭಾಷಾಂತರ ನಿರ್ದೇಶನಾಲಯ–ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (viii)ರನ್ವಯ ಸರ್ಕಾರಿ ಸೇವೆಯಿಂದ ವಜಾಗೊಳಿಸಿ, ಹಾಗೂ ಭಾಷಾಂತರ ನಿರ್ದೇಶನಾಲಯದ ಕರ್ತವ್ಯದಿಂದ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಮೇಲ್ಮನವಿಯಲ್ಲಿ ಶ್ರೀಮತಿ ಜಿ.ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕಿ, ಭಾಷಾಂತರ ನಿರ್ದೇಶನಾಲಯ – ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 22ರನ್ವಯ ಶಿಸ್ತು ಪ್ರಾಧಿಕಾರಿಯವರಿಗೆ ಸಲ್ಲಿಸಿದ್ದು, ಸದರಿ ಮೇಲ್ಮನವಿಯನ್ನು 24ನೇ ನಿಯಮದನ್ವಯ ಅಪೀಲು ಪ್ರಾಧಿಕಾರಿಯವರಿಗೆ ಕಳುಹಿಸಿಕೊಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ – ಇವರು ಶ್ರೀಮತಿ ಜಿ.ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕಿ, ಭಾಷಾಂತರ ನಿರ್ದೇಶನಾಲಯ – ಇವರ ಮೇಲ್ಮನವಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ 24ನೇ ನಿಯಮದನ್ವಯ ಅಪೀಲು ಪ್ರಾಧಿಕಾರಿಯವರಾದ ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಇಲಾಖೆ–ಇವರಿಗೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ (4)ರ ಪತ್ರದಲ್ಲಿ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ – ಇವರು ಶ್ರೀಮತಿ ಜಿ.ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕಿ, ಭಾಷಾಂತರ ನಿರ್ದೇಶನಾಲಯ – ಇವರು ಶಿಸ್ತು ಪ್ರಾಧಿಕಾರಿಯವರಿಗೆ ಸಲ್ಲಿಸಿರುವ ಮೇಲ್ಮನವಿಯಲ್ಲಿ ಇವರ ವಿರುದ್ಧ ಮಾಡಲಾಗಿರುವ ಆರೋಪಗಳನ್ನು ಅಲ್ಲಗಳೆಯಲು ಯಾವುದೇ ಪೂರಕ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಸದರಿಯವರು ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಿ, ದಂಡನಾದೇಶವನ್ನು ಸ್ಥಿರೀಕರಿಸಿ, ಪುರಸ್ಕರಿಸಲು ನಿರ್ದೇಶಕರು ಅಪೀಲು ಪ್ರಾಧಿಕಾರಿಯವರನ್ನು ಕೋರಿರುತ್ತಾರೆ.

ಮೇಲೆ ಓದಲಾದ (5)ರ ಪತ್ರದಲ್ಲಿ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ – ಇವರು ಅಪೀಲು ಪ್ರಾಧಿಕಾರಿಯವರಾದ ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಇಲಾಖೆ – ಇವರಿಗೆ ಇವರು ಶ್ರೀಮತಿ ಜಿ.ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕಿ, ಭಾಷಾಂತರ ನಿರ್ದೇಶನಾಲಯ – ಇವರ ಮೇಲ್ಮನವಿಯನ್ನು ತಿರಸ್ಕರಿಸಿ, ದಂಡನಾದೇಶವನ್ನು ಸ್ಥಿರೀಕರಿಸಿ, ಪುರಸ್ಕರಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (6)ರ ಸೂಚನಾ ಪತ್ರಗಳಲ್ಲಿ ಇವರು ಶ್ರೀಮತಿ ಜಿ.ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕಿ, ಭಾಷಾಂತರ ನಿರ್ದೇಶನಾಲಯ – ಇವರ ವಿರುದ್ಧ ವಿಧಿಸಿರುವ ದಂಡನೆಯ ಬಗ್ಗೆ, ಮೇಲ್ಮನವಿಯ ವಿಚಾರಣೆ ನಡೆಸುವ ಕುರಿತು ಕೊಠಡಿ ಸಂಖ್ಯೆ : 136, 1ನೇ ಮಹಡಿ, ವಿಧಾನಸೌಧ – ಇಲ್ಲಿ ನಿಗಧಿಪಡಿಸಿ, ಸದರಿ ವಿಚಾರಣೆಗೆ ತಪ್ಪದೇ ಹಾಜರಾಗುವಂತೆ ಹಾಗೂ ಮೌಖಿಕವಾಗಿ ಅಥವಾ ಲಿಖಿತವಾಗಿ ತಮ್ಮ ಅಹವಾಲು ಇದ್ದಲ್ಲಿ ತಿಳಿಸುವಂತೆ ಸೂಚಿಸಿ, ಸೂಚನಾ ಪತ್ರವನ್ನು ಆರ್.ಪಿ.ಎ.ಡಿ. ನಲ್ಲಿ ಸದರಿ ನೌಕರರಿಗೆ ಹಲವಾರು ಬಾರಿ ಕಳುಹಿಸಲಾಗಿತ್ತು. ಸದರಿಯವರು ಪತ್ರಗಳನ್ನು ಸ್ವೀಕರಿಸದೆ, ಹಿಂದಿರುಗಿಸಿರುತ್ತಾರೆ ಹಾಗೂ ಮೇಲ್ಮನವಿ ವಿಚಾರಣೆಗೆ ಹಾಜರಾಗಿರುವುದಿಲ್ಲ.

ಮೇಲೆ ಓದಲಾದ (7)ರ ವಿಜಯವಾಣಿ ದಿನಪತ್ರಿಕೆಯಲ್ಲಿ ಮೇಲ್ಮನವಿ ವಿಚಾರಣೆಗೆ ಹಾಜರಾಗುವಂತೆ ಪತ್ರಿಕಾ ಪ್ರಕಟಣೆಯನ್ನು ಸಹ ಮಾಡಲಾಗಿರುತ್ತದೆ. ಸದರಿ ಪತ್ರಿಕಾ ಪ್ರಕಟಣೆಯಲ್ಲಿ ಸದರಿ ವಿಚಾರಣೆಗೆ ತಪ್ಪದೆ ಹಾಜರಾಗುವಂತೆ ಹಾಗೂ ಮೌಖಿಕವಾಗಿ ಅಥವಾ ಲಿಖಿತವಾಗಿ ತಮ್ಮ ಅಹವಾಲು ಇದ್ದಲ್ಲಿ ತಿಳಿಸುವಂತೆ ಮತ್ತೊಮ್ಮೆ ಸೂಚಿಸಿ, ದಿನಾಂಕ : 13–07–2016ರಂದು ಕಡೆಯ ಅವಕಾಶವೆಂದು ತಿಳಿಸಿ, ಬಾರದಿದ್ದಲ್ಲಿ ಏಕಪಕ್ಷೀಯವಾಗಿ ಅಪೀಲು ಇತ್ಯರ್ಥಗೊಳಿಸಲಾಗುವುದು ಎಂದು ಜಾಹೀರಾತು ದಿನಾಂಕ : 29–06–2016ರಂದು ವಿಜಯವಾಣಿ ಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು. ಆದರೂ, ಸದರಿ ನೌಕರರು ಮೇಲ್ಮನವಿ ವಿಚಾರಣೆಗೆ ಹಾಜರಾಗಿರುವುದಿಲ್ಲ.

ಈ ಪ್ರಕರಣದಲ್ಲಿ,–

(1) ನಿರ್ದೇಶಕರು ಶಿಸ್ತು ಕ್ರಮ ಕೈಗೊಳ್ಳುವ ಪೂರ್ವದಲ್ಲಿ ಕೈಗೊಂಡಿರುವ ಪ್ರಕ್ರಿಯೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ಇವುಗಳಿಗನ್ವಯವಾಗಿದೆ. ಸಂವಿಧಾನ ಬದ್ಧವಾಗಿದೆ ಹಾಗೂ ನ್ಯಾಯ ಸಮ್ಮತವಾಗಿದೆ.

(2) ಇಲಾಖಾ ವಿಚಾರಣೆಯಲ್ಲಿ ಆರೋಪ ಅಥವಾ ದುರ್ನಡತೆ ಸಾಬೀತಾಗಿರುವುದು ಕಂಡು ಬಂದಿದೆ. ಇದು ನ್ಯಾಯ ಸಮ್ಮತವಾಗಿದೆ.

(3) ಸದರಿ ನೌಕರರಿಗೆ ವಿಧಿಸಿರುವ ದಂಡನೆ ಸರಿಯಾಗಿದೆ.

ಅಲ್ಲದೆ, ಇವರ ಮೇಲ್ಮನವಿ ಪರಿಶೀಲಿಸಲಾಗಿ, ಯಾವುದೇ ಹೊಸ ಅಂಶಗಳು ಇಲ್ಲದಿರುವುದು ಮನದಟ್ಟಾಗಿದೆ.

ಆದ್ದರಿಂದ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಂವ್ಯಶಾಇ 26 ಭಾನಿವಿ 2014, ಬೆಂಗಳೂರು, ದಿನಾಂಕ : 23–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 25ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ದ್ವಾರಕನಾಥ್ ಬಾಬು, ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಇಲಾಖೆ, ಬೆಂಗಳೂರು – ಆದ ನಾನು, ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು – ಇವರು ಹೊರಡಿಸಿರುವ ಆದೇಶ ಸಂಖ್ಯೆ : ಭಾನಿ 61/ಆಡಳಿತ 2010, ದಿನಾಂಕ : 21–05–2015ವನ್ನು ಸ್ಥಿರೀಕರಿಸುತ್ತೇನೆ ಹಾಗೂ ಮೇಲ್ಮನವಿಯನ್ನು ವಜಾಗೊಳಿಸಿದ್ದೇನೆ.

**P.R. 624**
**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ವಿನ್ಯಾಸ ನಕ್ಷೆ ತಯಾರಿಕೆ ಮತ್ತು ಪರಿಶೀಲನೆ ಕಾರ್ಯಕ್ಕಾಗಿ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಲ್ಲಿ ಭರಿಸಿಕೊಳ್ಳುತ್ತಿರುವ ಶುಲ್ಕಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಯುಡಿ 336 ಟಿಟಿಪಿ 1987, ದಿನಾಂಕ : 16–05–90.
2) ಸರ್ಕಾರದ ಆದೇಶ ಸಂಖ್ಯೆ : ನಅಇ 315 ಬೆಮಪ್ರಾ 2008, ದಿನಾಂಕ : 23–12–2008.
3) ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ : ನ.ಗ್ರಾ.ಯೋ/ವಿ.ಶು.ಪರಿಷ್ಕರಣೆ/ಸಮಿತಿಸಭೆ–1/13–14, ದಿನಾಂಕ : 27–08–2013.

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ರ ಸರ್ಕಾರದ ಆದೇಶದಲ್ಲಿ ವಿನ್ಯಾಸ ನಕ್ಷೆ ತಯಾರಿಕೆ ಮತ್ತು ಪರಿಶೀಲನೆ ಕಾರ್ಯಕ್ಕಾಗಿ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಲ್ಲಿ ಭರಿಸಿಕೊಳ್ಳುತ್ತಿರುವ ಶುಲ್ಕಗಳನ್ನು ಪರಿಷ್ಕರಿಸಿ ಆದೇಶಿಸಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಹಾಲಿ ಆದೇಶದನ್ವಯ ವಿನ್ಯಾಸ ನಕ್ಷೆ ತಯಾರಿಕೆ ಮತ್ತು ಪರಿಶೀಲನೆ ಕಾರ್ಯಕ್ಕಾಗಿ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಲ್ಲಿ ಈ ಕೆಳಕಂಡಂತೆ ಶುಲ್ಕಗಳನ್ನು ಭರಿಸಿಕೊಳ್ಳಲಾಗುತ್ತಿದೆ.

| ಕ್ರಮ ಸಂಖ್ಯೆ | ಕೆಲಸದ ವಿವರ | ಹಾಲಿ ಭರಿಸಿಕೊಳ್ಳಲಾಗುತ್ತಿರುವ ಶುಲ್ಕ |
|---|---|---|
| 1 | ವಿನ್ಯಾಸ ತಯಾರಿಕೆ ಮತ್ತು ರಚನೆ | ರೂ. 750/– ಪ್ರತಿ ಹೆಕ್ಟೇರ್‌ಗೆ |
| 2 | ವಿನ್ಯಾಸ ನಕ್ಷೆಗಳ ಪರಿಶೀಲನೆ ಮತ್ತು ರಚನೆ ಹಾಗೂ ಮಾರ್ಪಡಿಸುವುದು | ರೂ. 500/– ಪ್ರತಿ ಹೆಕ್ಟೇರ್‌ಗೆ |
| 3 | ನಕ್ಷೆಗಳ ಹೆಚ್ಚುವರಿ ಪ್ರತಿ ಪೂರೈಕೆ | ರೂ. 100/– ಪ್ರತಿ ಚ.ಮೀ.ಗೆ |

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಏಕ ಕಡತದಲ್ಲಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಇವರು ಪ್ರಸ್ತುತ ಪರಿಸ್ಥಿತಿಗೆ ಅನುಗುಣವಾಗಿ ಈ ಕೆಳಕಂಡಂತೆ ದರಗಳನ್ನು ಪರಿಷ್ಕರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | ಶುಲ್ಕ ಪಾವತಿಸಿಕೊಳ್ಳುವ ಹಂತ | ಹೊಸದಾಗಿ ಪ್ರಸ್ತಾಪಿಸಿದ ದರಗಳು | | ಷರಾ |
|---|---|---|---|---|
| | | ಜಮೀನಿನ ವಿಸ್ತೀರ್ಣ | ದರ | |
| 1 | ವಸತಿ/ವಸತಿಯೇತರ ವಿನ್ಯಾಸ ನಕ್ಷೆ ಅನುಮೋದನೆಗಾಗಿ ವಿಧಿಸಬಹುದಾದ ಪರಿಶೀಲನಾ ಶುಲ್ಕ | 1000 ಚ.ಮೀ. ವಿಸ್ತೀರ್ಣದವರೆಗೆ | ರೂ. 500/– | ಶುಲ್ಕದ ಒಟ್ಟು ಮೊತ್ತವನ್ನು ಸಮೀಪದ ರೂ. 10/–ಗಳಿಗೆ ಪೂರ್ಣಾಂಕಗೊಳಿಸಿ ಪಾವತಿಸಿಕೊಳ್ಳತಕ್ಕದ್ದು |
| | | 1000 ಚ.ಮೀ. ಮೇಲ್ಪಟ್ಟ ವಿಸ್ತೀರ್ಣಕ್ಕೆ | ರೂ. 500/– ಮತ್ತು ರೂ. 0.50 ರಂತೆ ಪ್ರತಿ ಚ.ಮೀ. ಅಳತೆಗೆ | |
| 2 | ವಸತಿ/ವಸತಿಯೇತರ ಅನುಮೋದಿತ ವಿನ್ಯಾಸಕ್ಕೆ ಮಾರ್ಪಾಡು ಕೋರಿದಾಗ, ಮಾರ್ಪಾಡಿತ ವಿನ್ಯಾಸ ಅನುಮೋದನೆಗಾಗಿ ವಿಧಿಸಬಹುದಾದ ಪರಿಶೀಲನಾ ಶುಲ್ಕ | 1000 ಚ.ಮೀ. ವಿಸ್ತೀರ್ಣದವರೆಗೆ | ರೂ. 250/– | |
| | | 1000 ಚ.ಮೀ. ಮೇಲ್ಪಟ್ಟ ವಿಸ್ತೀರ್ಣಕ್ಕೆ | ರೂ. 250/– ಮತ್ತು ರೂ. 0.25 ರಂತೆ ಪ್ರತಿ ಚ.ಮೀ. ಅಳತೆಗೆ | |
| 3 | ಅನುಮೋದಿತ ವಸತಿ/ವಸತಿಯೇತರ ವಿನ್ಯಾಸಗಳ ದೃಢೀಕೃತ ಪ್ರತಿಗಳ ಪೂರೈಕೆಗಾಗಿ ವಿಧಿಸಬಹುದಾದ ಶುಲ್ಕ | ಪ್ರತಿ ಚ.ಮೀ. ಅಥವಾ ಅದಕ್ಕಿಂತ ಕಡಿಮೆ ಅಳತೆಯ ವಿನ್ಯಾಸ ನಕ್ಷೆಗೆ ರೂ. 100.00 ಹಾಗೂ | | ಒಂದು ಪ್ರತಿ |
| | | 1. ಚ.ಮೀ. ಅಳತೆಗಿಂತ ಹೆಚ್ಚಿನ ಅಳತೆಯ ಹಾಗೂ ಅದರ ಭಾಗಾಂಶ ನಕ್ಷೆಗೆ ರೂ. 200.00 | | ಒಂದು ಪ್ರತಿ |

**ವಿಶೇಷ ಸೂಚನೆ :** ಈ ಕೆಳಕಂಡ ವಿನ್ಯಾಸ ಪರಿಷ್ಕರಣೆ ಪ್ರಕರಣಗಳಲ್ಲಿ ಮಾತ್ರ ಪರಿಶೀಲನಾ ಶುಲ್ಕ ವಿನಾಯಿತಿ ನೀಡಬಹುದು ಎಂದು ಶಿಫಾರಸ್ಸು ಮಾಡಲಾಗಿದೆ.

"ಅನುಮೋದಿಸಿರುವ ಬಡಾವಣೆ ನಕ್ಷೆಯಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ಕಛೇರಿ ವತಿಯಿಂದ ಕಾರ್ಟೋಗ್ರಾಫಿಕ್ ತಪ್ಪುಗಳಾಗಿದ್ದ ಪ್ರಕರಣಗಳಲ್ಲಿ".

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 13 ಟಿಟಿಪಿ 2013, ಬೆಂಗಳೂರು, ದಿನಾಂಕ : 01-09-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿನ್ಯಾಸ ನಕ್ಷೆ ತಯಾರಿಕೆ ಮತ್ತು ಪರಿಶೀಲನೆ ಕಾರ್ಯಕ್ಕಾಗಿ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯು ಭರಿಸಿಕೊಳ್ಳುವ ಶುಲ್ಕವನ್ನು ಈ ಕೆಳಗಿನಂತೆ ಕೂಡಲೇ ಜಾರಿಗೆ ಬರುವಂತೆ ಪರಿಷ್ಕರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಕೆಲಸದ ವಿವರ | ಜಮೀನಿನ ಅಳತೆ | ಪರಿಷ್ಕೃತ ದರ | ಷರಾ |
|---|---|---|---|---|
| 1 | ವಸತಿ/ವಸತಿಯೇತರ ವಿನ್ಯಾಸ ನಕ್ಷೆ ಅನುಮೋದನೆಗಾಗಿ ವಿಧಿಸಬಹುದಾದ ಪರಿಶೀಲನಾ ಶುಲ್ಕ | 1000 ಚ.ಮೀ. ವಿಸ್ತೀರ್ಣದವರೆಗೆ | ರೂ. 500/- | ಶುಲ್ಕದ ಒಟ್ಟು ಮೊತ್ತವನ್ನು ಸಮೀಪದ ರೂ. 10/-ಗಳಿಗೆ ಪೂರ್ಣಾಂಕಗೊಳಿಸಿ ಪಾವತಿಸಿಕೊಳ್ಳತಕ್ಕದ್ದು |
| | | 1000 ಚ.ಮೀ. ಮೇಲ್ಪಟ್ಟ ವಿಸ್ತೀರ್ಣಕ್ಕೆ | ರೂ. 500/- ಮತ್ತು ರೂ. 0.50 ರಂತೆ ಪ್ರತಿ ಚ.ಮೀ. ಅಳತೆಗೆ | |
| 2 | ವಸತಿ/ವಸತಿಯೇತರ ಅನುಮೋದಿತ ವಿನ್ಯಾಸಕ್ಕೆ ಮಾರ್ಪಾಡಿತ ವಿನ್ಯಾಸ ಅನುಮೋದನೆಗಾಗಿ ವಿಧಿಸಬಹುದಾದ ಪರಿಶೀಲನಾ ಶುಲ್ಕ | 1000 ಚ.ಮೀ. ವಿಸ್ತೀರ್ಣದವರೆಗೆ | ರೂ. 250/- | |
| | | 1000 ಚ.ಮೀ. ಮೇಲ್ಪಟ್ಟ ವಿಸ್ತೀರ್ಣಕ್ಕೆ | ರೂ. 250/- ಮತ್ತು ರೂ. 0.25 ರಂತೆ ಪ್ರತಿ ಚ.ಮೀ. ಅಳತೆಗೆ | |
| 3 | ಅನುಮೋದಿತ ವಸತಿ/ವಸತಿಯೇತರ ವಿನ್ಯಾಸಗಳ ದೃಢೀಕೃತ ಪ್ರತಿಗಳ ಪೂರೈಕೆಗಾಗಿ ವಿಧಿಸಬಹುದಾದ ಶುಲ್ಕ | ಪ್ರತಿ ಚ.ಮೀ. ಅಥವಾ ಅದಕ್ಕಿಂತ ಕಡಿಮೆ ಅಳತೆಯ ವಿನ್ಯಾಸ ನಕ್ಷೆಗೆ ರೂ. 100.00 ಹಾಗೂ | | ಒಂದು ಪ್ರತಿ |
| | | 1. ಚ.ಮೀ. ಅಳತೆಗಿಂತ ಹೆಚ್ಚಿನ ಅಳತೆಯ ಹಾಗೂ ಅದರ ಭಾಗಾಂಶ ನಕ್ಷೆಗೆ ರೂ. 200.00 | | ಒಂದು ಪ್ರತಿ |

**ವಿಶೇಷ ಸೂಚನೆ :** ಈ ಕೆಳಕಂಡ ವಿನ್ಯಾಸ ಪರಿಷ್ಕರಣೆ ಪ್ರಕರಣಗಳಲ್ಲಿ ಮಾತ್ರ ಪರಿಶೀಲನಾ ಶುಲ್ಕ ವಿನಾಯಿತಿ ನೀಡಬಹುದು ಎಂದು ಶಿಫಾರಸ್ಸು ಮಾಡಲಾಗಿದೆ.

"ಅನುಮೋದಿಸಿರುವ ಬಡಾವಣೆ ನಕ್ಷೆಯಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ಕಛೇರಿ ವತಿಯಿಂದ ಕಾರ್ಟೋಗ್ರಾಫಿಕ್ ತಪ್ಪುಗಳಾಗಿದ್ದ ಪ್ರಕರಣಗಳಲ್ಲಿ".

**P.R. 625**
**S.C. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಕರಾವಳಿ ರಾಜ್ಯಗಳಲ್ಲಿ ನಿಗಾವಹಿಸಿ, ನಿರ್ವಹಣೆ ಮತ್ತು ಚಾಲನೆ ನೀಡುವ ಕುರಿತು ಕರಾವಳಿ ಭದ್ರತೆ ಸಂಬಂಧಿಸಿದ ವಿಷಯಗಳ ಬಗ್ಗೆ ರಾಜ್ಯ ಮಟ್ಟದ ಸಮಿತಿ ಮತ್ತು ಕರಾವಳಿ ಜಿಲ್ಲಾ ಮಟ್ಟದ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ :** 1) ಕೇಂದ್ರ ಗೃಹಮಂತ್ರಾಲಯ (ಗಡಿ ನಿರ್ವಹಣಾ ಇಲಾಖೆ) ರವರ ಕಛೇರಿ ಆದೇಶ ಸಂಖ್ಯೆ: 5/23/2016-ಕೋಸ್ಟಲ್ ಸೆಕ್ಯೂರಿಟಿ, ದಿನಾಂಕ : 14/06/2016.

2) ಒಳಾಡಳಿತ ಇಲಾಖೆ, ಕರ್ನಾಟಕ ಸರ್ಕಾರ, ಸಮ ಸಂಖ್ಯೆ ಆದೇಶ ದಿನಾಂಕ : 15-06-2016.

**ಪ್ರಸ್ತಾವನೆ :**

ಕೇಂದ್ರ ಗೃಹಮಂತ್ರಾಲಯದ ಕಛೇರಿ ಆದೇಶ ದಿನಾಂಕ : 14-06-2016ರ ಪತ್ರದಲ್ಲಿ ದಿನಾಂಕ : 06-06-2016 ರಂದು ಕೇಂದ್ರ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಕರಾವಳಿ ಭದ್ರತಾ ಪುನರಾವಲೋಕನ ಸಭೆಯಲ್ಲಿ ಚರ್ಚಿಸಿದಂತೆ, ಕರಾವಳಿ ರಾಜ್ಯಗಳಲ್ಲಿ/ಕೇಂದ್ರಾಡಳಿತ ಪ್ರದೇಶಗಳಲ್ಲಿ ಉಸ್ತುವಾರಿ (ಶಿಸ್ತು ನೋಡಿಕೊಳ್ಳಲು), ವ್ಯವಸ್ಥೆ ಮತ್ತು ಕರಾವಳಿ ಭದ್ರತೆಗೆ ಸಂಬಂಧಿಸಿದ ವಿಷಯಗಳನ್ನು ನೋಡಿಕೊಳ್ಳಲು, ಕರಾವಳಿ ರಾಜ್ಯ/ಕೇಂದ್ರಾಡಳಿತ ಪ್ರದೇಶಗಳ ರಾಜ್ಯ ಮಟ್ಟದ ಸಮಿತಿ ಮತ್ತು ಕರಾವಳಿ ಜಿಲ್ಲಾ ಮಟ್ಟದ ಸಮಿತಿಗಳನ್ನು ರಚಿಸಲು ತೀರ್ಮಾನಿಸಲಾಗಿದೆ ಹಾಗೂ ಸದರಿ ರಚಿಸಲಾಗುವ ಸಮಿತಿಗಳಿಗೆ ಪರಿಶೀಲನಾ ಅಂಶಗಳನ್ನು ಸಂಯೋಜಿಸಲು ನಿರ್ದೇಶನ ನೀಡಲಾಗಿದೆ.

ಒಳಾಡಳಿತ ಇಲಾಖೆ, ಕರ್ನಾಟಕ ಸರ್ಕಾರ, ಉಲ್ಲೇಖ (2)ರ ಪತ್ರದಲ್ಲಿ ಈ ವಿಷಯದ ಬಗ್ಗೆ ಆದೇಶವನ್ನು ಹೊರಡಿಸಿದೆ. ಕೇಂದ್ರ ಗೃಹಮಂತ್ರಾಲಯ ಆದೇಶದಂತೆ, ದಿನಾಂಕ : 15-06-2016 ರಂದು ಹೊರಡಿಸಲಾಗಿರುವ ಆದೇಶಕ್ಕೆ ಪರಿಷ್ಕರಣೆ ಮಾಡಬೇಕಾಗಿದ್ದು,

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 185 ಎಸ್‌ಎಸ್‌ಟಿ 2016, ಬೆಂಗಳೂರು, ದಿನಾಂಕ : 12-09-2016.**

ರಾಜ್ಯಮಟ್ಟದ ಮತ್ತು ಜಿಲ್ಲಾ ಮಟ್ಟದ ಕರಾವಳಿ ಭದ್ರತಾ ಸಮಿತಿಗಳನ್ನು ರಾಷ್ಟ್ರೀಯ ಭದ್ರತೆಯನ್ನು ಗಮನದಲ್ಲಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಕರಾವಳಿ ಭದ್ರತೆಗೆ ಸಂಬಂಧಿಸಿದಂತೆ, ಪುನರಾವಲೋಕನ ಮಾಡಲು ಸರ್ಕಾರವು ಸದರಿ ಸಮಿತಿಗಳನ್ನು ರಚಿಸಿದೆ.

**(i) ರಾಜ್ಯಮಟ್ಟದ ಕರಾವಳಿ ಭದ್ರತಾ ಸಮಿತಿ**

| | | |
|---|---|---|
| 1) | ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2) | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ | ಸದಸ್ಯ ಕಾರ್ಯದರ್ಶಿ |
| 3) | ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು | ಸದಸ್ಯರು |
| 4) | ಕೇಂದ್ರ ಗೃಹಮಂತ್ರಾಲಯದ ಪ್ರತಿನಿಧಿ (ಎಂ.ಹೆಚ್.ಎ) ಭಾರತ ಸರ್ಕಾರ | ಸದಸ್ಯರು |
| 5) | ಕೇಂದ್ರ ಗುಪ್ತಚರ ಇಲಾಖೆಯ ಪ್ರತಿನಿಧಿ (ಎಂ.ಹೆಚ್.ಎ) ಭಾರತ ಸರ್ಕಾರ | ಸದಸ್ಯರು |
| 6) | ಪೊಲೀಸ್ ಮಹಾನಿರ್ದೇಶಕರು (ಆಂತರಿಕ ಭದ್ರತಾ ವಿಭಾಗ) | ಸದಸ್ಯರು |
| 7) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | ಸದಸ್ಯರು |
| 8) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ | ಸದಸ್ಯರು |
| 9) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 10) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ | ಸದಸ್ಯರು |
| 11) | ನೌಕಾಧಿಕಾರಿ-ಉಸ್ತುವಾರಿ, ಕರ್ನಾಟಕ (ಎನ್‌ಓಐಸಿ-ಕೆಟಿಕೆ) | ಸದಸ್ಯರು |
| 12) | ಜಿಲ್ಲಾ ದಂಡಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ | ಸದಸ್ಯರು |
| 13) | ಜಿಲ್ಲಾ ದಂಡಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ | ಸದಸ್ಯರು |
| 14) | ಜಿಲ್ಲಾ ದಂಡಾಧಿಕಾರಿಗಳು, ಉಡುಪಿ ಜಿಲ್ಲೆ | ಸದಸ್ಯರು |
| 15) | ಕಮಾಂಡರ್ ಆಫ್ ಇಂಡಿಯನ್ ಕೋಸ್ಟ್‌ಗಾರ್ಡ್, ಕರ್ನಾಟಕ | ಸದಸ್ಯರು |
| 16) | ಮೀನುಗಾರಿಕೆ ನಿರ್ದೇಶಕರು | ಸದಸ್ಯರು |
| 17) | ಬಂದರು ನಿರ್ದೇಶಕರು | ಸದಸ್ಯರು |
| 18) | ಪ್ರವಾಸೋದ್ಯಮ ನಿರ್ದೇಶಕರು | ಸದಸ್ಯರು |
| 19) | ಆಯುಕ್ತರು, ಕಸ್ಟಮ್ಸ್ | ಸದಸ್ಯರು |
| 20) | ಮೆ॥ ಗೋವಾ ಶಿಪ್‌ಯಾರ್ಡ್ ಲಿ. ಪ್ರತಿನಿಧಿ, ಗೋವಾ | ಸದಸ್ಯರು |

**ಪರಿಶೀಲನಾ ಅಂಶಗಳು :**

(i) ಕರಾವಳಿ ಭದ್ರತೆಗೆ ಸಂಬಂಧಿಸಿದಂತೆ, ಕೇಂದ್ರ ಗೃಹಮಂತ್ರಾಲಯದಿಂದ ನೀಡಲ್ಪಡುವ ಅಂಶಗಳ ಬಗ್ಗೆ ಸಮಿತಿಯು ಉಸ್ತುವಾರಿ ನಡೆಸುವುದು;

(ii) ಸಮಿತಿಯು ಜಿಲ್ಲಾ ಮಟ್ಟದ ಕರಾವಳಿ ಭದ್ರತಾ ಸಮಿತಿಗಳ ಕಾರ್ಯದ ಬಗ್ಗೆ ಪುನರಾವಲೋಕನ ಮತ್ತು ಉಸ್ತುವಾರಿ ಮಾಡುವುದು ;

(iii) ಸಮಿತಿಯ ಅಧ್ಯಕ್ಷರು ನಿರ್ದಿಷ್ಟ ವಿಷಯಗಳಿಗೆ ಸಂಬಂಧಿಸಿದಂತೆ, ಸೂಕ್ತ ಸದಸ್ಯರನ್ನು ವಿಶೇಷ ಆಹ್ವಾನಿತರಾಗಿ ಸಭೆಗೆ ಸೇರ್ಪಡಿಸಬಹುದು ;

(iv) ರಾಜ್ಯ ಮಟ್ಟದ ಸಮಿತಿಯು ಪ್ರತಿ 6 ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು ;

**ಜಿಲ್ಲಾ ಮಟ್ಟದ ಕರಾವಳಿ ಭದ್ರತಾ ಸಮಿತಿ**

**(ದಕ್ಷಿಣ ಕನ್ನಡ, ಉತ್ತರ ಕನ್ನಡ, ಉಡುಪಿ ಜಿಲ್ಲೆಗಳು)**

| | | |
|---|---|---|
| 1) | ಜಿಲ್ಲಾಧಿಕಾರಿಗಳು / ಜಿಲ್ಲಾ ದಂಡಾಧಿಕಾರಿಗಳು | ಅಧ್ಯಕ್ಷರು |
| 2) | ಪೊಲೀಸ್ ಆಯುಕ್ತರು, ಮಂಗಳೂರು ನಗರ | ಸದಸ್ಯರು |
| 3) | ಪೊಲೀಸ್ ಅಧೀಕ್ಷಕರು, ಕರಾವಳಿ ಭದ್ರತಾ ಪೊಲೀಸ್, (ಸಿ.ಎಸ್.ಪಿ) | ಸದಸ್ಯ ಕಾರ್ಯದರ್ಶಿ |
| 4) | ಪೊಲೀಸ್ ಅಧೀಕ್ಷಕರು | ಸದಸ್ಯರು |
| 5) | ಉಪ ನಿರ್ದೇಶಕರು, ಮೀನುಗಾರಿಕೆ | ಸದಸ್ಯರು |
| 6) | ಬಂದರುಗಳು ಅಧಿಕಾರಿ-ಪ್ರತಿನಿಧಿ | ಸದಸ್ಯರು |
| 7) | ಉಪ ನಿರ್ದೇಶಕರು, ಪ್ರವಾಸೋದ್ಯಮ | ಸದಸ್ಯರು |

| | | |
|---|---|---|
| 8) | ಭಾರತೀಯ ಕೋಸ್ಟ್ ಗಾರ್ಡ್–ಪ್ರತಿನಿಧಿ | ಸದಸ್ಯರು |
| 9) | ಕಸ್ಟಮ್ಸ್ – ಪ್ರತಿನಿಧಿ | ಸದಸ್ಯರು |
| 10) | ರೈಲ್ವೇಸ್ – ಪ್ರತಿನಿಧಿ | ಸದಸ್ಯರು |
| 11) | ಗುಪ್ತಚರ ಇಲಾಖೆ – ಪ್ರತಿನಿಧಿ | ಸದಸ್ಯರು |
| 12) | ನೌಕಾ/ಎನ್‌ಎಂಪಿಟಿ/ಎಂಆರ್‌ಪಿಎಲ್/ಕೈಗಾ ನಾಮನಿರ್ದೇಶಿತ | ಸದಸ್ಯರು |

**ಪರಿಶೀಲನಾ ಅಂಶಗಳು :**

(i) ಜಲ್ಲಾಮಟ್ಟದ ಸಮಿತಿಯು ಕರಾವಳಿ ಭದ್ರತೆಗೆ ಸಂಬಂಧಿಸಿದಂತೆ, ಸ್ಥಳೀಯ ಮಟ್ಟದ ಅಂಶಗಳನ್ನು ಚರ್ಚಿಸುವುದು/ಉಸ್ತುವಾರಿ ನಡೆಸುವುದು.

(ii) ಸದರಿ ಸಮಿತಿಯು ಇತರೆ ಸಂಬಂಧಿತ ವಿಷಯಗಳನ್ನೊಳಗೊಂಡಂತೆ ಚರ್ಚಿಸಿ, ಸಭೆ ನಡೆಸುವುದು.

(iii) ಸದರಿ ಸಮಿತಿಯು ಕನಿಷ್ಠ ಮೂರು ತಿಂಗಳಿಗೊಮ್ಮೆ ಅಥವಾ ಮೂರು ತಿಂಗಳಿಗಿಂತ ಮುನ್ನವೇ ಅವಶ್ಯವಿದ್ದಲ್ಲಿ ಸಭೆ ನಡೆಸುವುದು.

**P.R. 626**
**S.C. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಪದ್ಮಿನಿದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 232 ಸೇಲೋಯ 2016, ಬೆಂಗಳೂರು, ದಿನಾಂಕ : 30–08–2016.**

ಮಾಹಿತಿ ಹಕ್ಕು ಅಧಿನಿಯಮ, 2005ರ (2005ರ ಕೇಂದ್ರ ಅಧಿನಿಯಮ ಸಂಖ್ಯೆ : 22) ಪ್ರಕರಣ 5(1), 5(2) ಮತ್ತು 19(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜಾಗೃತ ವಿಭಾಗ)ಗೆ ಸಂಬಂಧಿಸಿದಂತೆ, ಈ ಕೆಳಕಂಡಂತೆ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಪ್ರಥಮ ಮೇಲ್ಮನವಿ ಪ್ರಾಧಿಕಾರಗಳನ್ನು ಗುರುತಿಸಿ ನೇಮಕ ಮಾಡಲಾಗಿದೆ :–

| ಕ್ರ.ಸಂ. | ಪ್ರಾಧಿಕಾರ | ಪದನಾಮ |
|---|---|---|
| 1 | ಸಾರ್ವಜನಿಕ ಮಾಹಿತಿ ಅಧಿಕಾರಿ | ಸರ್ಕಾರದ ಅಧೀನ ಕಾರ್ಯದರ್ಶಿ,<br>ಸಿ.ಆ.ಸು. ಇಲಾಖೆ (ಜಾಗೃತ ವಿಭಾಗ) |
| 2 | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಶಾಖಾಧಿಕಾರಿ,<br>ಸಿ.ಆ.ಸು. ಇಲಾಖೆ (ಜಾಗೃತ ವಿಭಾಗ) |
| 3 | ಪ್ರಥಮ ಮೇಲ್ಮನವಿ ಪ್ರಾಧಿಕಾರ | ಸರ್ಕಾರದ ಉಪ ಕಾರ್ಯದರ್ಶಿ,<br>ಸಿ.ಆ.ಸು.ಇಲಾಖೆ (ಜಾಗೃತ ವಿಭಾಗ) |

**P.R. 627**
**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾ ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಜಾಗೃತ ವಿಭಾಗ)

## ಕಂದಾಯ ಸಚಿವಾಲಯ

**ವಿಷಯ :** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ನಕಾಶೆಗಾರರ ವೃಂದದ ಹುದ್ದೆಗಳನ್ನು ಸಮಾನಾಂತರ ವೇತನ ಶ್ರೇಣಿಯ ಹುದ್ದೆಗಳಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಭೂಮಾಪನ ಇಲಾಖೆ ರವರ ಪತ್ರ ಸಂಖ್ಯೆ: ಎಸ್‌ಎಸ್‌ಎಲ್‌ಆರ್:ಇಎಸ್‌ಟಿ: ಎಸ್‌ಎಂ.ಜಿಸಿ–011: 2013–14, ದಿನಾಂಕ : 25–11–2013, 29–04–2014 ಮತ್ತು 21–12–2015.
2. ನಕಾಶೆ ವಿಭಾಗದ ನೌಕರರ ಮನವಿ ದಿನಾಂಕ : 21–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : 1 ರ ಪತ್ರದಲ್ಲಿ, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಸುಮಾರು 8–9 ವರ್ಷಗಳಿಂದ ಡ್ರಾಫ್ಟ್‌ಮನ್ (ಹಿಂದಿನ ದ್ವಿತೀಯ ದರ್ಜೆ ನಕಾಶೆಗಾರರು) ಹುದ್ದೆಯು ಖಾಲಿ ಇದ್ದರೂ, ಈಗಿನ ಆಧುನೀಕರಣದ ವ್ಯವಸ್ಥೆಯಿಂದ ಭೂಮಾಪನ ಇಲಾಖೆಯ ಭೂಮಾಪಕರಿಂದಲೇ ಡ್ರಾಫ್ಟ್‌ಮನ್‌ಗಳು ನಿರ್ವಹಿಸುವ ಕೆಲಸ ಕಾರ್ಯಗಳನ್ನು ಪಡೆಯಲಾಗುತ್ತಿದೆ. ಆದುದರಿಂದ ಭೂಮಾಪನ ಇಲಾಖೆಗೆ ಡ್ರಾಫ್ಟ್‌ಮನ್ ವೃಂದದ ಹುದ್ದೆಯ ಅವಶ್ಯಕತೆಯು ಈಗ ಇರುವುದಿಲ್ಲವಾದ್ದರಿಂದ ಈ ಹುದ್ದೆಗಳನ್ನು ಕಾರ್ಯನಿರ್ವಾಹಕ ವೃಂದದ ಸಮಾನಾಂತರ

ಹುದ್ದೆಗಳಾದ, ಅಂದರೆ ಅಧೀಕ್ಷಕರು (ನಕಾಶೆ) ಹುದ್ದೆಯನ್ನು ಅಧೀಕ್ಷಕರು (ಕಾ.ನಿ) ವೃಂದಕ್ಕೆ, ಪರ್ಯಾವೇಕ್ಷಕರು (ನಕಾಶೆ) ಹುದ್ದೆಯನ್ನು ಪರ್ಯಾವೇಕ್ಷಕರು ವೃಂದಕ್ಕೆ ಮತ್ತು ಪ್ರಥಮ ದರ್ಜೆ ನಕಾಶೆಗಾರರ ಹುದ್ದೆಯನ್ನು ಪ್ರಥಮ ದರ್ಜೆ ಭೂಮಾಪಕರ ವೃಂದಕ್ಕೆ ಹಾಗೂ ಡ್ರಾಫ್ಟ್‌ಮನ್ ವೃಂದದ ಹುದ್ದೆಯನ್ನು ದ್ವಿತೀಯ ದರ್ಜೆ ಸಹಾಯಕ ಹುದ್ದೆಯಲ್ಲಿ ವಿಲೀನಗೊಳಿಸಲು, ಯಾವುದೇ ತೊಂದರೆ ಇರುವುದಿಲ್ಲವೆಂದು ಮತ್ತು ಈ ಎಲ್ಲಾ ಹುದ್ದೆಗಳ ವೇತನ ಶ್ರೇಣಿಯು ಸಮಾನಾಂತರವಾಗಿರುವುದರಿಂದ ಪ್ರಸ್ತಾಪಿಸಿದಂತೆ ವಿಲೀನಗೊಳಿಸಿದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆ ಬೀಳುವುದಿಲ್ಲವೆಂದು ತಿಳಿಸಿ, ಈ ಕೆಳಗಿನಂತೆ ನಮೂದಿಸಿದ ಹುದ್ದೆಗಳೊಂದಿಗೆ ವಿಲೀನಗೊಳಿಸಿ ವೃಂದ ಮತ್ತು ನೇಮಕಾತಿ ನಿಯಮಗಳಂತೆ ಭರ್ತಿ ಮಾಡಲು ಭೂದಾಖಲೆಗಳ ಇಲಾಖೆಯ ಆಯುಕ್ತರು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

| ಕ್ರ. ಸಂ. | ನಕಾಶೆಗಾರರ ವೃಂದದಲ್ಲಿರುವ ಹುದ್ದೆಗಳ ಹೆಸರು ಮತ್ತು ವೇತನ ಶ್ರೇಣಿ | ಪರಿವರ್ತಿಸಲು ಕೋರಿರುವ ಹುದ್ದೆಗಳ ಹೆಸರು ಮತ್ತು ವೇತನ ಶ್ರೇಣಿ |
|---|---|---|
| 1. | ಅಧೀಕ್ಷಕರು (ನಕಾಶೆ) ₹. 20000-36300 | ಅಧೀಕ್ಷಕರು (ಕಾ.ನಿ) ₹. 20000–36300 |
| 2. | ಪರ್ಯಾವೇಕ್ಷಕರು (ನಕಾಶೆ) ₹. 17650-32000 | ಪರ್ಯಾವೇಕ್ಷಕರು ₹. 17650-32000 |
| 3. | ಪ್ರಥಮ ದರ್ಜೆ ನಕಾಶೆಗಾರರು ₹. 14550-26700 | ಪ್ರಥಮ ದರ್ಜೆ ಭೂಮಾಪಕರು ₹. 14550-26700 |
| 4. | ಡ್ರಾಫ್ಟ್‌ಮನ್ ₹. 11600-21000 | ದ್ವಿತೀಯ ದರ್ಜೆ ಸಹಾಯಕರು ₹. 11600-21000 |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಡ್ರಾಫ್ಟ್‌ಮನ್ ಹುದ್ದೆ ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಕಾರ್ಯಸ್ವರೂಪ ಮತ್ತು ಜವಾಬ್ದಾರಿ ಬೇರೆ ಬೇರೆಯಾಗಿರುತ್ತದೆ. ಆದ್ದರಿಂದ ಡ್ರಾಫ್ಟ್‌ಮನ್ ಹುದ್ದೆಗಳನ್ನು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಲ್ಲಿ ವಿಲೀನಗೊಳಿಸಲು ಸಾಧ್ಯವಾಗುವುದಿಲ್ಲ. ಇದನ್ನು ಹೊರತುಪಡಿಸಿ ಹುದ್ದೆಗಳ ವಿಲೀನಾತಿಗೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 250 ಭೂದಾಸ 2013, ಬೆಂಗಳೂರು, ದಿನಾಂಕ : 16–03–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಅಧೀಕ್ಷಕರು (ನಕಾಶೆ), ಪರ್ಯಾವೇಕ್ಷಕರು (ನಕಾಶೆ) ಮತ್ತು ಪ್ರಥಮ ದರ್ಜೆ ನಕಾಶೆಗಾರರು ಈ ಎಲ್ಲಾ ವೃಂದದ ಹುದ್ದೆಗಳನ್ನು ಕ್ರಮವಾಗಿ ಅಧೀಕ್ಷಕರು (ಕಾರ್ಯನಿರ್ವಾಹಕ), ಪರ್ಯಾವೇಕ್ಷಕರು ಮತ್ತು ಪ್ರಥಮ ದರ್ಜೆ ಭೂಮಾಪಕರ ಹುದ್ದೆಗಳಲ್ಲಿ ವಿಲೀನಗೊಳಿಸಲು ಸರ್ಕಾರವು ಆದೇಶಿಸಿದೆ.

ಈ ಬಗ್ಗೆ ವೃಂದ ಮತ್ತು ನೇಮಕ ನಿಯಮಾವಳಿಗಳಿಗೆ ತಿದ್ದುಪಡಿ ತರಲು ಪ್ರತ್ಯೇಕವಾದ ಕ್ರಮ ಕೈಗೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಆಇ 64 ವೆಚ್ಚ–7/2016, ದಿನಾಂಕ : 10–02–2016 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

**P.R. 646**

**SC-100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

**ಸಿ. ಪುಟ್ಟನಂಜಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಭೂಮಾಪನ)

## ಕಂದಾಯ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಯಲ್ಲಾಪುರ ಗ್ರಾಮದ ಸ.ನಂ. 80 ರಲ್ಲಿ 5.00 ಎಕರೆ ಜಮೀನನ್ನು ವಿಶ್ವದರ್ಶನ ಎಜುಕೇಶನ್ ಸೊಸೈಟಿ, ಯಲ್ಲಾಪುರ ಇವರಿಗೆ ಮಂಜೂರು ಮಾಡಿದ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರ ಸಂಖ್ಯೆ: ಕಂಶಾ/ಎಲ್ಎನ್‌ಡಿ1/ಸಿಆರ್–103/2013–14 ದಿನಾಂಕ: 25.04.2015 ಮತ್ತು 13.01.2016.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಮೇಲೆ ಓದಲಾದ ಪತ್ರಗಳಲ್ಲಿ ಯಲ್ಲಾಪುರ ತಾಲ್ಲೂಕು, ಯಲ್ಲಾಪುರ ಗ್ರಾಮದ ಸ.ನಂ. 80 ರಲ್ಲಿ 5.00 ಎಕರೆ ಜಮೀನನ್ನು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 9 ಎಲ್‌ಜಿಎನ್ 2010 ದಿನಾಂಕ: 16.09.2011 ರನ್ವಯ ವಿಶ್ವದರ್ಶನ ಎಜುಕೇಶನ್ ಸೊಸೈಟಿ, ಯಲ್ಲಾಪುರ ಇವರಿಗೆ ರಾಷ್ಟ್ರೀಯ ತೋಟಗಾರಿಕಾ ಮಿಷನ್‌ನಿಂದ ಪುಷ್ಪಾಭಿವೃದ್ಧಿ ಘಟಕ ಯೋಜನೆಯನ್ನು ಸಾಕಾರಗೊಳಿಸುವ ಬಗ್ಗೆ ಮಂಜೂರು ಮಾಡಲಾಗಿದ್ದು, ಅದೇ ಉದ್ದೇಶಕ್ಕೆ ಬಳಸುವ ಷರತ್ತನ್ನು ವಿಧಿಸಿ ಖಾಯಂ ಆಗಿ ಮಂಜೂರು ಮಾಡಲಾಗಿತ್ತು. ಆದರೆ ಸದರಿ ಸಂಸ್ಥೆಯು ಮಂಜೂರಾತಿ ಆದೇಶದಲ್ಲಿ ನಿಗದಿಪಡಿಸಿದ ಎರಡು ವರ್ಷದ ಅವಧಿಯಲ್ಲಿ ಯಾವುದೇ ಅಭಿವೃದ್ಧಿ ಕೆಲಸಗಳನ್ನು ಕೈಗೊಂಡಿರುವುದಿಲ್ಲ ಹಾಗೂ ಸದರಿ ಜಮೀನು ಖಾಲಿ ಇರುವುದರಿಂದ ಮಂಜೂರಾತಿ ಆದೇಶದಲ್ಲಿನ ಷರತ್ತನ್ನು ಉಲ್ಲಂಘಿಸಿರುವುದರಿಂದ ಸದರಿ ಸಂಸ್ಥೆಗೆ ಜಮೀನು ಮಂಜೂರು ಮಾಡಿದ ಆದೇಶವನ್ನು ರದ್ದುಪಡಿಸಿ ಆದೇಶ ಹೊರಡಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮುಂದುವರೆದು, ತಹಶೀಲ್ದಾರ್, ಯಲ್ಲಾಪುರ ತಾಲ್ಲೂಕು, ಯಲ್ಲಾಪುರ ಇವರು ಉದ್ದೇಶಿತ ಜಮೀನಿನ ಸ್ಥಳ ಪರಿಶೀಲನೆ ಮಾಡಿ ಉಪವಿಭಾಗಾಧಿಕಾರಿ, ಶಿರಸಿ ಉಪವಿಭಾಗ, ಶಿರಸಿ ರವರಿಗೆ ದಿನಾಂಕ: 15.12.2014 ರಂದು ವರದಿ ಮಾಡಿರುತ್ತಾರೆ. ತಮ್ಮ ವರದಿಯಲ್ಲಿ ಸುತ್ತ ಕಾಂಪೌಂಡ್ ನಿರ್ಮಿಸಿದ್ದು, ಒಂದು ಬೋರ್‌ವೆಲ್ ಇರುವುದಾಗಿ ವರದಿ ಮಾಡಿರುತ್ತಾರೆ ಹಾಗೂ ಹಿಂದಿನಂತೆ ಯಥಾಸ್ಥಿತಿ ಇದ್ದು, ಯಾವದೇ ಅಭಿವೃದ್ಧಿ ಕೆಲಸವಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ ಹಾಗೂ ಮಂಜೂರಾತಿ ಆದೇಶದಲ್ಲಿನ ಷರತ್ತು ಉಲ್ಲಂಘನೆ ಆಗಿರುವುದರಿಂದ ಮಂಜೂರಾತಿ ಆದೇಶವನ್ನು ರದ್ದುಪಡಿಸುವಂತೆ ಅಭಿಪ್ರಾಯ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳು ತಮ್ಮ ಸಂಖ್ಯೆ: ಎಲ್ಎನ್‌ಡಿ–1/ವಿವ/103/2013–14 ದಿನಾಂಕ: 05/13.02.2015 ರಲ್ಲಿ ಮಂಜೂರಾತಿಯನ್ನು ಏಕೆ ರದ್ದುಪಡಿಸಬಾರದು ಎಂದು ಅಧ್ಯಕ್ಷರು, ವಿಶ್ವದರ್ಶನ ಎಜುಕೇಶನ್ ಸೊಸೈಟಿ (ರಿ), ಯಲ್ಲಾಪುರ

ಇವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿರುತ್ತಾರೆ. ಸದರಿ ಕಾರಣ ಕೇಳುವ ನೋಟೀಸ್‌ಗೆ ಸಂಸ್ಥೆಯ ಕಾರ್ಯದರ್ಶಿಗಳು ದಿನಾಂಕ: 30.03.2015 ರಂದು ಹೇಳಿಕೆ ನೀಡಿರುತ್ತಾರೆ. ತಮ್ಮ ಹೇಳಿಕೆಯಲ್ಲಿ ತಾಂತ್ರಿಕ ಕಾರಣಗಳಿಂದ ಕ್ರಿಯಾಯೋಜನೆಗೆ ತಿದ್ದುಪಡಿ ಸೂಚಿಸಿರುತ್ತಾರೆ. ಪ್ರಸಕ್ತ ವರ್ಷದಲ್ಲಿ ಮಂಜೂರಾತಿ ದೊರಕಿದೆ. ತೋಟಗಾರಿಕಾ ಇಲಾಖೆಯ ನಿಯಮದಂತೆ ನಿರ್ಮಿಸಬೇಕಾಗಿರುವುದರಿಂದ ವಿಳಂಬ ಆಗಿದೆ. ಆದ್ದರಿಂದ ಉದ್ದೇಶಿತ ಜಮೀನನ್ನು ಸರ್ಕಾರದ ವರ್ಷಕ್ಕೆ ತೆಗೆದುಕೊಳ್ಳುವುದನ್ನು ಕೈಬಿಡುವಂತೆ ಹೇಳಿಕೆ ನೀಡಿರುತ್ತಾರೆ.

ಕಾರ್ಯದರ್ಶಿಗಳು, ವಿಶ್ವದರ್ಶನ ಎಜುಕೇಶನ್ ಸೊಸೈಟಿ (ರಿ) ಯಲ್ಲಾಪುರ ರವರ ದಿನಾಂಕ: 30.03.2015ರ ಹೇಳಿಕೆಯನ್ನು ಪರಿಶೀಲಿಸಿ, ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರು ತಮ್ಮ ವರದಿಯಲ್ಲಿ ಜಮೀನು ಮಂಜೂರಾತಿ ಆದೇಶದಲ್ಲಿನ ಷರತ್ತುಗಳನ್ನು ಉಲ್ಲಂಘಿಸಿರುವುದು ದೃಢಪಟ್ಟಿರುವುದರಿಂದ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಸರ್ಕಾರಿ ಜಮೀನಿನ ಲಭ್ಯತೆ ಕಡಿಮೆಯಿದ್ದು, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ವಿದ್ಯಾರ್ಥಿಗಳಿಗೆ ವಸತಿ ನಿಲಯ, ಅಲ್ಪ ಸಂಖ್ಯಾತ ವರ್ಗದ ವಿದ್ಯಾರ್ಥಿಗಳಿಗೆ ವಸತಿ ನಿಲಯ, ಸರ್ಕಾರಿ ಕಛೇರಿ ಕಟ್ಟಡಗಳ ನಿರ್ಮಾಣದ ಬಗ್ಗೆ ಹಾಗೂ ಇನ್ನಿತರ ಸಾರ್ವಜನಿಕ ಉದ್ದೇಶಕ್ಕಾಗಿ ಸರ್ಕಾರಿ ಜಮೀನಿನ ಅವಶ್ಯಕತೆಯಿರುವುದರಿಂದ ವಿಶ್ವದರ್ಶನ ಎಜುಕೇಶನ್ ಸೊಸೈಟಿ (ರಿ) ಯಲ್ಲಾಪುರ ಸಂಸ್ಥೆಗೆ ಯಲ್ಲಾಪುರ ತಾಲ್ಲೂಕು, ಯಲ್ಲಾಪುರ ಗ್ರಾಮದ ಸ.ನಂ. 80 ರಲ್ಲಿನ 5–00 ಎಕರೆ ಜಮೀನನ್ನು ಖಾಯಂ ಆಗಿ ಮಂಜೂರು ಮಾಡಿದ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 9 ಎಲ್‌ಜಿಎನ್ 2010 ದಿನಾಂಕ: 16.09.2011ನ್ನು ರದ್ದುಪಡಿಸಿ ಆದೇಶ ಹೊರಡಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 12 ಎಲ್‌ಜಿಎನ್ 2015, ದಿನಾಂಕ: 09–06–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಶ್ವದರ್ಶನ ಎಜುಕೇಶನ್ ಸೊಸೈಟಿ (ರಿ) ಯಲ್ಲಾಪುರ ರವರಿಗೆ ಉತ್ತರ ಕನ್ನಡ ಜಿಲ್ಲೆ, ಯಲ್ಲಾಪುರ ತಾಲ್ಲೂಕು, ಯಲ್ಲಾಪುರ ಗ್ರಾಮದ ಸ.ನಂ. 80 ರಲ್ಲಿನ 5–00 ಎಕರೆ ಜಮೀನನ್ನು ಮಂಜೂರು ಮಾಡಿದ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 09 ಎಲ್‌ಜಿಎನ್ 2010 ಬೆಂಗಳೂರು ದಿನಾಂಕ: 16.09.2011 ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ ಹಾಗೂ ಉದ್ದೇಶಿತ ಜಮೀನನ್ನು ಸರ್ಕಾರದ ಸುಪರ್ದಿಗೆ ತೆಗೆದುಕೊಳ್ಳಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ.

**PR. 617**
**SC. 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–2)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬಿ.ವಿ. ದೀಪಕ್ ಬಿನ್ ಬಿ.ಟಿ. ವಾಸುದೇವ, ಈಚಿಕೆರೆ, ಎನ್.ಆರ್.ಪುರ ತಾಲ್ಲೂಕ್, ಚಿಕ್ಕಮಗಳೂರು ಜಿಲ್ಲೆ ಇವರಿಗೆ ಭದ್ರಾಜಲಾಶಯ ಯೋಜನೆಯಡಿ ಸ್ವಾದೀನವಾದ ಭೂಮಿಗೆ ಪರ್ಯಾಯವಾಗಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸ್ಪೇಷಲ್ ಲ್ಯಾಂಡ್ ಅಕ್ವಿಸಿಷನ್ ಆಫಿಸರ್ ಭದ್ರ ಪ್ರಾಜೆಕ್ಟ್ ನರಸಿಂಹರಾಜಪುರ ರವರ ಪತ್ರ ಸಂಖ್ಯೆ: ಎಲ್.ಎನ್.ಡಿ. 87/60–61 ದಿನಾಂಕ: 27.01.1961.
2) ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಎಂ2 ಎಲ್‌ಎನ್‌ಡಿ ಸಿಆರ್ 61/2012–13 ದಿನಾಂಕ: 26.11.2015, ಮತ್ತು 28.07.2016.
3) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂ: 24351/2012(ಕೆಎಲ್‌ಆರ್‌ಎಲ್‌ಜಿ)ರಲ್ಲಿ ಮಾನ್ಯ ನ್ಯಾಯಾಲಯ ದಿನಾಂಕ: 05.10.2015 ರಂದು ನೀಡಿರುವ ತೀರ್ಪು.
4) ಮಾನ್ಯ ಉಚ್ಚನ್ಯಾಯಾಲಯದಲ್ಲಿ ನ್ಯಾಯಾಲಯ ನಿಂದನಾ ಅರ್ಜಿ ಸಿಸಿಸಿ (ಸಿವಿಲ್) ಸಂಖ್ಯೆ: 634/2016.

**ಪ್ರಸ್ತಾವನೆ :**

ವಿಶೇಷ ಭೂಸ್ವಾಧೀನಾಧಿಕಾರಿ, ಭದ್ರಾ ಯೋಜನೆ, ನರಸಿಂಹರಾಜಪುರ, ಇವರ ಮೇಲೆ (1)ರಲ್ಲಿ ಓದಲಾದ ಪತ್ರ ದಿನಾಂಕ: 27.01.1961 ರಲ್ಲಿ ಅರ್ಜಿದಾರರಾದ ಶ್ರೀ ತಿಮ್ಮೇಗೌಡ ಎಂಬುವವರ ಒಟ್ಟು 11.22 ಎಕರೆ ತರಿ ಮತ್ತು ಭಾಗಾಯತು ಜಮೀನನ್ನು ಭದ್ರಾಜಲಾಶಯ ಯೋಜನೆಗೆ ಭೂ ಸ್ವಾಧೀನ ಆಗಿದ್ದು ಇದಕ್ಕೆ ಪರ್ಯಾಯವಾಗಿ 4 ಎಕರೆ ಖುಷ್ಕಿ ಜಮೀನನ್ನು ಮಂಜೂರು ಈಗಾಗಲೇ ಮಾಡಲಾಗಿದ್ದು ಅವರಿಗೆ ನಿಯಮಾನುಸಾರ 15 ಎಕರೆ ಖುಷ್ಕಿ ಜಮೀನನ್ನು ಈಚಿಕೆರೆ ಗ್ರಾಮದ ಸ.ನಂ. 24 ರಲ್ಲಿ ಮಂಜೂರು ಮಾಡಲು ವಿಶೇಷಾಧಿಕಾರಿ, ಪುನರ್ ವಸತಿ, ಶಿವಮೊಗ್ಗ ಇವರಿಗೆ ತಿಳಿಸಿರುತ್ತಾರೆ.

ಚಿಕ್ಕಮಗಳೂರು ಜಿಲ್ಲೆ, ನರಸಿಂಹರಾಜಪುರ ತಾಲ್ಲೂಕು ಹಳೆದಾನಿವಾಸ ಮತ್ತು ತಡಸ ಗ್ರಾಮಗಳ ಒಟ್ಟು 11.22 ಎಕರೆ ತರಿ ಮತ್ತು ಬಾಗಾಯ್ತು ಜಮೀನುಗಳು ಭದ್ರಾ ಜಲಾಶಯ ಯೋಜನೆಗಾಗಿ ಅರ್ಜಿದಾರರು ಕಳೆದುಕೊಂಡಿರುವುದರ ಪರ್ಯಾಯವಾಗಿ ಸರ್ಕಾರಿ ಜಮೀನು ಮಂಜೂರು ಮಾಡದಿರುವುದನ್ನು ಪ್ರಶ್ನಿಸಿ ಶ್ರೀ ಬಿ.ಟಿ. ವಾಸುದೇವ ಬಿನ್ ಲೇ: ತಿಮ್ಮಯ್ಯಗೌಡ ಎಂಬುವವರು ರಿಟ್ ಅರ್ಜಿ ಸಂ: 4500/99 ಅನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದೆ ರಿಟ್ ಅರ್ಜಿ ಸಲ್ಲಿಸಿದ್ದರು. ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 12.02.1999 ರಂದು ಆದೇಶ ನೀಡಿ, ರಿಟ್ ಅರ್ಜಿದಾರರು ಪರ್ಯಾಯ ಜಮೀನು ಮಂಜೂರಾತಿ ಕೋರಿ ಸಲ್ಲಿಸಿರುವ ಅರ್ಜಿಯನ್ನು ಪುನರ್ ವಸತಿ ಯೋಜನೆಯಡಿ ಜಮೀನು ಲಭ್ಯತೆಗೊಳಪಟ್ಟು ಪರಿಗಣಿಸುವಂತೆ ನಿರ್ದೇಶನ ನೀಡಿತ್ತು ಎಂಬುದು ಜಿಲ್ಲಾಧಿಕಾರಿಯರ ವರದಿ ದಿನಾಂಕ: 26.11.2015ರಲ್ಲಿ ತಿಳಿಸಿದ್ದಾರೆ.

ಈ ಬಗ್ಗೆ ಪರಿಶೀಲಿಸಿ ಶ್ರೀ ತಿಮ್ಮೇಗೌಡ ಎಂಬುವವರು 1958–59ನೇ ಸಾಲಿನಲ್ಲಿ ಹಳೆದಾನಿವಾಸ ಮತ್ತು ತಡಸಾ ಗ್ರಾಮದ ಅವರ ಖಾತೆಯ 7.07 $^{1}/_{2}$ ಎಕರೆ ಕೆರೆ ನೀರಾವರಿ ಕೆರೆ ನೀರಾವರಿ ತರಿ, 14 $^{1}/_{2}$ ಗುಂಟೆ ಬಾಗಯ್ತು ಮತ್ತು 4.00 ಎಕರೆ ತರಿ ಜಮೀನನ್ನು ಭದ್ರಾ ಜಲಾಶಯ ಯೋಜನೆಗೆ ಕಳೆದುಕೊಂಡಿರುವುದಾಗಿಯೂ, ಇದಕ್ಕೆ ಪ್ರತಿಯಾಗಿ ಇವರಿಗೆ 4.00 ಎಕರೆ ಖುಷ್ಕಿ ಜಮೀನನ್ನು ಮಂಜೂರು ಮಾಡಲಾಗಿದೆಯೆಂದೂ, ಬಾಕಿ 15.00 ಎಕರೆ ಖುಷ್ಕಿ ಜಮೀನನ್ನು ಈಚಿಕೆರೆ ಗ್ರಾಮದ ಸ.ನಂ. 24 ರಲ್ಲಿ ಮಂಜೂರು ಮಾಡಲು ಕಡತ ರಚಿಸಿರುವುದಾಗಿಯೂ, ಈಚಿಕೆರೆ ಗ್ರಾಮದ ಸ.ನಂ. 24 ರಲ್ಲಿ ಈವರೆಗಿನ ವಿಲೇವಾರಿ ಜಾತ ಉಳಿದಿರುವ ಜಮೀನು ಅರಣ್ಯ ಭೂಮಿ ಆಗಿರುವುದರಿಂದ ಅರ್ಜಿದಾರರ ಕೋರಿಕೆಯಂತೆ ಜಮೀನು ಮಂಜೂರು ಮಾಡಲು

ಅವಕಾಶವಿರುವುದಿಲ್ಲವೆಂದು ಜಿಲ್ಲಾಧಿಕಾರಿಗಳ ಕಛೇರಿಯ ಸಂಖ್ಯೆ ಎಂ2 ಎಲ್ಎನ್‌ಡಿ.ಸಿಆರ್: 9/99–2000 ದಿನಾಂಕ: 24.01.2000 ದಂತೆ ಹಿಂಬರಹ ನೀಡಲಾಗಿತ್ತು. ಸದರಿ ಹಿಂಬರಹವನ್ನು ಪ್ರಶ್ನಿಸಿ ಶ್ರೀ ಬಿ.ಟಿ. ವಾಸುದೇವ ಇವರ ವಾರಸುದಾರರಾದ ಶ್ರೀ ಬಿ.ವಿ. ದೀಪಕ್ ಎಂಬುವವರು ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದಲ್ಲಿ ಅಪೀಲು ಸಂಖ್ಯೆ: 143/2000 ರಂತೆ ಮೇಲ್ಮನವಿ ಸಲ್ಲಿಸಿದ್ದರು. ಸದರಿ ಮೇಲ್ಮನವಿ ನ್ಯಾಯಾಧಿಕರಣವು ದಿನಾಂಕ: 27.11.2000 ರಂದು ತೀರ್ಪು ನೀಡಿ ಜಿಲ್ಲಾಧಿಕಾರಿಯವರ ಹಿಂಬರಹವನ್ನು ತಳ್ಳಿಹಾಕಿ ಅರ್ಜಿದಾರರಿಗೆ ಅವಕಾಶಗಳನ್ನು ನೀಡಿ, ವಿಚಾರಣೆ ನಡೆಸಿ ಜಮೀನಿನ ವಿಸ್ತೀರ್ಣ ಮತ್ತು ಜಮೀನಿನ ಸಹಜ ಲಕ್ಷಣವನ್ನು ತೀರ್ಮಾನಿಸಿದ ನಂತರ, ಕಾನೂನು ಪ್ರಕಾರ ಆದೇಶ ಹೊರಡಿಸುವಂತೆ ಪ್ರಕರಣವನ್ನು ಜಿಲ್ಲಾಧಿಕಾರಿಗಳಿಗೆ ಹಿಂದಿರುಗಿಸಿತ್ತು. ಮೇಲ್ಮನವಿ ನ್ಯಾಯಾಧಿಕರಣದ ಆದೇಶದಂತೆ ವಿಚಾರಣೆ ನಡೆಸಿದ ನಂತರ ಈಚಿಕೆರೆ ಗ್ರಾಮದ ಸ.ನಂ. 24 ರಲ್ಲಿನ ಅರಣ್ಯ ಭೂಮಿಯನ್ನು ಹೊರತುಪಡಿಸಿ ಉಳಿದ 3.30 ಎಕರೆ ಸರ್ಕಾರಿ ಜಮೀನನ್ನು ಅರ್ಜಿದಾರರಿಗೆ ಮಂಜೂರು ಮಾಡಿ ಜಿಲ್ಲಾಧಿಕಾರಿಗಳ ಕಛೇರಿ ಸಂ.ಎಂ2 ಎಲ್ಎನ್‌ಡಿ.ಸಿಆರ್: 9/99–2000 ದಿನಾಂಕ: 19.03.2002 ರಲ್ಲಿ ಆದೇಶ ಹೊರಡಿಸಲಾಗಿದೆ.

ಅರ್ಜಿದಾರರು ಅವರ ಕುಟುಂಬಕ್ಕೆ ಸೇರಿದ ಜಮೀನು ಮುಳುಗಡೆ ಆಗಿರುವುದಕ್ಕೆ ಪ್ರತಿಯಾಗಿ 15.00 ಎಕರೆ ಬದಲಿ ಜಮೀನು ಮಂಜೂರು ಮಾಡಬೇಕಾಗಿದೆಯೆಂದೂ, ಆ ಪೈಕಿ 3.30 ಎಕರೆ ಮಾತ್ರ ಮಂಜೂರು ಮಾಡಿರುವುದರಿಂದ ಬಾಕಿ ಉಳಿದ 11.10 ಎಕರೆ ಜಮೀನನ್ನು ನರಸಿಂಹರಾಜಪುರ ತಾಲ್ಲೂಕು ಬಿಳಾಲಕೊಪ್ಪ ಗ್ರಾಮದ ಸ.ನಂ. 12, 146 ಹಾಗೂ ಮೆಣಸೂರು ಗ್ರಾಮದ ಸ.ನಂ. 89, 90, 91 ರಲ್ಲಿ ಲಭ್ಯವಿರುವ ಸರ್ಕಾರಿ ಜಮೀನನ್ನು ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿರುವುದನ್ನು ಪರಿಗಣಿಸುವಂತೆ ನಿರ್ದೇಶನ ಕೋರಿ ಅರ್ಜಿದಾರರು ಮೇಲೆ (3) ರಲ್ಲಿ ಓದಲಾದ ರಿಟ್ ಪಿಟಿಷನ್ ನಂ: 24351/2012(ಕೆಎಲ್ಆರ್–ಎಲ್‌ಜಿ) ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದೆ ರಿಟ್ ಅರ್ಜಿಯನ್ನು ಸಲ್ಲಿಸಿದ್ದರು. ಗೌರವಾನ್ವಿತ ಉಚ್ಚ ನ್ಯಾಯಾಲಯವು ಪ್ರಕರಣದ ಬಗ್ಗೆ ದಿನಾಂಕ 05.10.2015ರಂದು ನೀಡಿರುವ ತೀರ್ಪಿನ ಉದೃತ ಭಾಗ ಈ ಕೆಳಕಂಡಂತಿರುತ್ತದೆ:–

> "Petitioner to identify which of the lands he would be interested in an extent of 11 acres and 10 guntas, as an alternate land in lieu of having lost his lands way back in the year 1958, in an acquisition, without compensation and if such a representation, identifying the lands is made to the State Government within 15 days from today, there is no reason to believe that respondent-authorities would not consider the same and pass orders in accordance with law, by 30th November 2015".

ಗೌರವಾನ್ವಿತ ಉಚ್ಚ ನ್ಯಾಯಾಲಯದ ಮೇಲ್ಕಂಡ ತೀರ್ಪಿನ ಮೇರೆಗೆ ಅರ್ಜಿದಾರರು ದಿನಾಂಕ: 19.10.2015 ರಂದು ಜಿಲ್ಲಾಧಿಕಾರಿರವರಿಗೆ ಅರ್ಜಿ ಸಲ್ಲಿಸಿ ನರಸಿಂಹರಾಜಪುರ ತಾಲ್ಲೂಕು ಸೂಸಲವಾನಿ ಗ್ರಾಮದ ಸ.ನಂ. 32/2 ರಲ್ಲಿ ಒತ್ತುವರಿಯನ್ನು ತೆರವು ಮಾಡಿರುವ ಸರ್ಕಾರಿ ಜಮೀನಿನ ಪೈಕಿ 11.10 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಸದರಿ ಕೋರಿಕೆಯ ಬಗ್ಗೆ ಪರಿಶೀಲಿಸಿ ಸ್ಥಳೀಯ ಅಧಿಕಾರಿಗಳು ಸೂಸಲವಾನಿ ಗ್ರಾಮದ ಸ.ನಂ. 32/2 ರಲ್ಲಿ ಒಟ್ಟು 31.18 ಎಕರೆ ಜಮೀನಿದ್ದು, ಸದರಿ ಜಮೀನು ಕಾಫಿ ಖರಾಬು ಎಂದು ವರ್ಗೀಕರಿಸಿದ ಸರ್ಕಾರಿ ಜಮೀನಾಗಿರುತ್ತದೆ. ಈ ಸರ್ವೆನಂಬರಿನಲ್ಲಿ ಒತ್ತುವರಿ ಮಾಡಿರುವುದನ್ನು ತೆರವುಗೊಳಿಸಿ ಲಭ್ಯವಿರುವ ಜಮೀನಿನ ಪೈಕಿ 11.10 ಎಕರೆ ಜಮೀನನ್ನು ಅರ್ಜಿದಾರರಿಗೆ ಕಾಫಿ ಸಾಗುವಳಿಗಾಗಿ ಮಂಜೂರು ಮಾಡಲು ಸರ್ವೆಯಿಂದ ಗುರುತಿಸಲಾಗಿರುತ್ತದೆ. ಜಮೀನಿನಲ್ಲಿ ಕೆಲವು ನೈಸರ್ಗಿಕವಾದ ಮರಗಳಿರುವುದರಿಂದ ಅವುಗಳ ವಿಲೇವಾರಿ ಬಗ್ಗೆ ಅರಣ್ಯ ಇಲಾಖೆಯಿಂದ ಪ್ರತ್ಯೇಕ ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ಕರ್ನಾಟಕ ಭೂ ಮಂಜೂರಿ ನಿಯಮಗಳು, 1969ರ ನಿಯಮ–27ರ ಪ್ರಕಾರ ವಿಶೇಷ ಪ್ರಕರಣವೆಂದು ಪರಿಗಣಿಸಿ, ನರಸಿಂಹರಾಜಪುರ ತಾಲ್ಲೂಕು ಸೂಸಲವಾನಿ ಗ್ರಾಮದ ಸ.ನಂ. 32/2 ರಲ್ಲಿ 11.10 ಎಕರೆ ಜಮೀನನ್ನು ಕಾಫಿ ಸಾಗುವಳಿಗಾಗಿ ಶ್ರೀ ಬಿ.ವಿ. ದೀಪಕ್ ಬಿನ್ ಬಿ.ಟಿ. ವಾಸುದೇವ ಎಂಬುವವರಿಗೆ ಅರ್ಜಿದಾರರ ಕುಟುಂಬದ ಜಮೀನುಗಳು ಭದ್ರಾ ಜಲಾಶಯ ಯೋಜನೆಯಡಿ ಮುಳುಗಡೆಯಾಗಿರುವುದಕ್ಕೆ ಪರ್ಯಾಯವಾಗಿ ಮಂಜೂರು ಮಾಡುವಂತೆ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ರವರು ಮೇಲೆ (2)ರ ಪತ್ರ ದಿನಾಂಕ: 26.11.2015ರಲ್ಲಿ ಕೋರಿರುತ್ತಾರೆ.

ಏತನ್ಮಧ್ಯೆ ಅರ್ಜಿದಾರರು ರಿಟ್ ಅರ್ಜಿ ಸಂಖ್ಯೆ: 24351/2012ರ ದಿನಾಂಕ: 05.10.2015ರ ಮಾನ್ಯ ನ್ಯಾಯಾಲಯದ ಆದೇಶವನ್ನು ಪಾಲಿಸಿಲ್ಲವೆಂದು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮೇಲೆ (4) ರಲ್ಲಿ ಓದಲಾದ ನ್ಯಾಯಾಲಯ ನಿಂದನಾ ಅರ್ಜಿ ಸಿಸಿಸಿ(ಸಿವಿಲ್) ಸಂಖ್ಯೆ: 634/2016ನ್ನು ದಾಖಲಿಸಿರುತ್ತಾರೆ.

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 59 ಎಲ್‌ಜಿಯು 2015, ದಿನಾಂಕ: 09–08–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಮಗಳೂರು ಜಿಲ್ಲೆ ನರಸಿಂಹರಾಜಪುರ ತಾಲ್ಲೂಕು ಸೂಸಲವಾನಿ ಗ್ರಾಮದ ಸ.ನಂ. 32/2 ರಲ್ಲಿ 11.10 ಎಕರೆ ಜಮೀನನ್ನು ಕಾಫಿ ಸಾಗುವಳಿಗಾಗಿ ಶ್ರೀ ಬಿ.ವಿ. ದೀಪಕ್ ಬಿನ್ ಬಿ.ಟಿ. ವಾಸುದೇವ ಎಂಬುವವರಿಗೆ ಅರ್ಜಿದಾರರ ಕುಟುಂಬದ ಜಮೀನುಗಳು ಭದ್ರಾ ಜಲಾಶಯ ಯೋಜನೆಯಡಿ ಮುಳುಗಡೆಯಾಗಿರುವುದಕ್ಕೆ ಪರ್ಯಾಯವಾಗಿ ಮಂಜೂರು ಮಾಡಲು ಸರ್ಕಾರದ ಮಂಜೂರಾತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

ಷರತ್ತುಗಳು:–

1) ಮಂಜೂರು ಮಾಡಿರುವ ಮೇಲ್ಕಂಡ ಜಮೀನಿನಲ್ಲಿ ನೈಸರ್ಗಿಕವಾಗಿ ಬೆಳೆದ ಮರಗಳ ವಿಲೇವಾರಿ ಬಗ್ಗೆ ಅರಣ್ಯ ಇಲಾಖೆಯಿಂದ ಪ್ರತ್ಯೇಕ ಕ್ರಮ ಕೈಗೊಳ್ಳತಕ್ಕದ್ದು.
2) ಶ್ರೀ ಬಿ.ವಿ. ದೀಪಕ್ ಬಿನ್ ಬಿ.ಟಿ. ವಾಸುದೇವ ಎಂಬುವರು ತಿಮ್ಮೇಗೌಡರ ವಾರಸುದಾರರು ಎಂಬ ಬಗ್ಗೆ ಜಿಲ್ಲಾಧಿಕಾರಿಯವರು ಖಾತ್ರಿಪಡಿಸಿ–ಕೊಳ್ಳತಕ್ಕದ್ದು.

**PR. 618**
**SC. 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–2)

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



## COMMERCE & INDUSTRIES SECRETARIAT

**Sub:** Transfer of Shares of Vijayanagar Steel Ltd., held by Officers of Government of Karnataka – reg.

**Read:**
1. Government Order No. CI 154 SPI 2013, dated: 04.04.2015.
2. Letter of Managing Director, Vijayanagar Steel Ltd., No. VSL/MD/CI:ToS/2016-17, Dated: 09.08.2016.

**PREAMBLE:**

In the Government order read at (1) above has stated that the following officers of Government of Karnataka are holding one share each with a face value Rs. 1000/- of Vijayanagar Steel Ltd

| Sl. No. | No. of Shares | Share Amount Rs. | Share Holder |
|---|---|---|---|
| 01 | 01 | 1000/- | Sri Naveen Raj Singh, IAS, Managing Director, KSIIDC & Chariman, VNSL |
| 02 | 01 | 1000/- | Sri Gaurav Gupta, IAS Commissioner for ID & Director Industries & Commerce |
| 03 | 01 | 1000/- | Sri Anil A Uppin, Managing Director, VNVL & MD., Additional Director (Viswa), I&C Department |
| 04 | 01 | 1000/- | Sri R. Ramesh, Director (Technical Cell), C&I Department |
| 05 | 01 | 1000/- | Smt S. Umadevi, Desk Officer (Technical Cell), C&I Department |
| 06 | 01 | 1000/- | Smt Jaganmatha, Additional Secretary, C&I Department |
| **Total** | **06** | **6000/-** | |

The Managing Director, Vijayanagar Steel Ltd., vide his letter read above has stated that, as per Government Order No. CI 154 SPI 2013, dated: 04.04.2015, Sri Navenn Raj Singh, IAS, previously Managing Director, KSIIDC & Chairman VSNL holds 1 number share of M/s Vijaynagar steel Ltd. Consequent to change in Managing Director, KSIIDC, Sri Pankaj Kumar Pandey, IAS, has been appointed as Director of M/s Vijayanagar Steel Ltd. Vide Notification No. CI 221 SP 2016, dated: 22.07.2016.

Therefore, he is requested that the share held by Sri Naveen Raj Singh, IAS may be transferred in the name of Sri Pankaj Kumar Pandey, IAS.

Hence the following order.

**GOVERNMENT ORDER NO. CI 13 SPI 2016, BENGALURU, DATED : 31.08.2016**

The Government is pleased to accord approval to the transfer of the share of Vijayanagar Steel Ltd., in favour of the following officer.

| Sl. No. | Share Holder | Official presently holding the post |
|---|---|---|
| 01 | Sri Navenn Raj Singh, IAS, previous Managing Director, KSIIDC & Chairman, VNSL | Sri Pankaj Kumar Pandey, IAS, Managing Director, KSIIDC & Chairman, VNSL |

**PR. 619**
**SC. 25**

By Order and in the Name of the Governor of Karnataka,
**S. UMADEVI,**
Desk Officer (Technical Cell),
Commerce & Industries Department.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.